# ಮಾನಸಿ

ತಿಂಗಳ ಪತ್ರಿಕೆ

ಅಕ್ಟೋಬರ್ - ನವೆಂಬರ್ : 1997

* ಕೌಟುಂಬಿಕ ಕ್ರೌರ್ಯ
* ಮಾಧ್ಯಮಗಳು, ಸ್ತ್ರೀ ಮತ್ತು ಕ್ರೌರ್ಯ
* ಸಿನೆಮಾದಲ್ಲಿ ಮಹಿಳೆ - ಕ್ರೌರ್ಯ
* ರಾಜಾಸ್ಥಾನದಲ್ಲಿ ಮಹಿಳೆಯರ ವಿರುದ್ಧ ಹೆಚ್ಚುತ್ತಿರುವ ಅಪರಾಧ

ಮಾನಸ

ತಿಂಗಳ ಪತ್ರಿಕೆ

ಸಂಪುಟ : 12 ಸಂಚಿಕೆ : 8-9
ಅಕ್ಟೋಬರ್ ನವೆಂಬರ್ : 1997



ವಿಳಾಸ :
"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ 3-00 ರೂ.
ವಾರ್ಷಿಕ ಚಂದಾ 40-00 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು

ಈ ಸಂಚಿಕೆಯಲ್ಲಿ....





ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ಸ್ತ್ರೀಯರ ಶ್ರಮ, ಲೈಂಗಿಕತೆ, ತಾಯ್ತನ, ಕುಟುಂಬದ ಒಳಗಡೆ ಹಾಗೂ ಹೊರಗಡೆ ಅದರ ಚಲನೆಯ ನಿರ್ಬಂಧ, ದುಡಿಯುವ ಸ್ಥಳದಲ್ಲಿ ಒಟ್ಟಾಗಿ ಸಮಾಜದಲ್ಲಿ ಸ್ತ್ರೀಯರನ್ನು ನಿಯಂತ್ರಿಸುವ, ಪುರುಷರ ಕೈಯಲ್ಲಿರುವ ಒಂದು ವ್ಯವಸ್ಥೆಯೇ ಪಿತೃಪ್ರಧಾನತೆ. ಈ ಪಿತೃಪ್ರಧಾನತೆ ತಾತ್ವಿಕ ಹಾಗೂ ಭೌತಿಕ ಮಟ್ಟದಲ್ಲಿ ಕೆಲಸ ಮಾಡುತ್ತದೆ. ಇದು ಸಮಾಜದ ಉತ್ಪಾದನಾ ಸಂಬಂಧಗಳ ಹಾಗೂ ಜಾತಿ ಸಂಬಂಧಗಳ ಜೊತೆ ಪ್ರಕ್ರಿಯೆ ನಡೆಸುತ್ತದೆ. ಪುರುಷರ ಹಾಗೂ ಬಂಡವಾಳಶಾಹಿ ಸಮಾಜದ ಒಳಿತಿಗೆ, ಪೂರಕವಾಗಿ ಕೆಲಸ ಮಾಡುತ್ತದೆ. ಕುಟುಂಬದಲ್ಲಿ ಈ ವ್ಯವಸ್ಥೆಯ ಪ್ರಧಾನತೆ ಹಾಗೂ ತುಳಿತವನ್ನು ನೋಡಬಹುದು.

ತುಳಿತಕ್ಕೊಳಗಾದ ಜನಾಂಗವನ್ನು ನಿರಂತರವಾಗಿ ಭಯ ಹಾಗೂ ಆತಂಕದಲ್ಲಿ ಇಡುವ ಉದ್ದೇಶದಿಂದ ಹಿಂಸೆಯನ್ನು ಒಂದು ತಂತ್ರವನ್ನಾಗಿ ಬಳಸಿಕೊಳ್ಳಲಾಗುತ್ತಿದೆ. ಸ್ತ್ರೀಯರ ಜೀವನದ ವಿವಿಧ ಆಯಾಮಗಳಲ್ಲಿ ಆಕ್ರಮಿಸಿರುವ ಹಿಂಸೆಯ ಎರಡು ರೀತಿಯಲ್ಲಿ ಕೆಲಸ ಮಾಡುತ್ತದೆ. ಕ್ರೂರವಾದ, ಅಮಾನುಷವಾದ ನೇರವಾದ ರೀತಿಯಲ್ಲಿ, ಇನ್ನೊಂದು ಹಂತದಲ್ಲಿ ಸೂಕ್ಷ್ಮವಾದ, ನಯವಾದ ಸಾಂಸ್ಕೃತಿಕ, ಮೌಲ್ಯಗಳ ಹಿನ್ನೆಲೆಯಲ್ಲಿ ನಡೆಯುತ್ತಧೆ. ನೇರವಾಗಿ ಪ್ರತ್ಯಕ್ಷವಾಗಿ ನಡೆಯುವ ಹಿಂಸೆಯ ಪ್ರತಿಭಟನೆ, ಸಂಘಟಿತರಾಗುವುದು ಸಾಧ್ಯವಾಗಬಹುದು. ಆದರೆ ಸ್ತ್ರೀಯರೇ ಒಪ್ಪಿಕೊಂಡು ಬದುಕುವ ಮೌಲ್ಯಗಳನ್ನು ಪ್ರತಿಭಟಿಸುವುದು ಸಂಕೀರ್ಣವಾದದು. ಈ ಮಾದರಿಯ ಹಿಂಸೆ, ಸ್ತ್ರೀಯ ಮನಸ್ಸು ಹಾಗೂ ದೇಹ, ಸಮಗ್ರ ವ್ಯಕ್ತಿತ್ವವನ್ನು ಧಿಕ್ಕರಿಸಲು ನಡೆಸುವ ದಾಳಿಯಾಗಿದೆ.

''Personal is Political" ಎಂಬ ಘೋಷಣೆಯನ್ನು ಮಹಿಳಾ ಚಳುವಳಿ ಹುಟ್ಟು ಹಾಕುವುದರ ಮೂಲಕ ಶತಮಾನಗಳಿಂದ ಖಾಸಗಿ ಎಂದು ಪ್ರತ್ಯೇಕಗೊಳಿಸಲಾಗಿದ್ದ ಮಹಿಳೆಯರ ಬದುಕಿಗೆ ಒಂದು ರಾಜಕೀಯ ಆಯಾಮವನ್ನು ನೀಡಿತು. ಈ ಪ್ರಯತ್ನದ ಫಲವಾಗಿ ವರದಕ್ಷಿಣೆ ಸಾವು, ಅತ್ಯಾಚಾರ, ಮುಖ್ಯವಾಗಿ ಕುಟುಂಬದೊಳಗೆ, ನಾಲ್ಕು ಗೋಡೆಯ ಒಳಗಡೆ ನಡೆಯುತ್ತಿದ್ದ ಅಮಾನುಷ ಕ್ರೌರ್ಯಕ್ಕೆ ರಾಜಕೀಯ ಆಯಾಮವನ್ನು ನೀಡಿ ಸಂಘಟನೆಯ ಅಡಿಪಾಯವನ್ನು ಹಾಕಿತು. ಹಿಂಸೆಯ ಕಾರಣ, ಪ್ರತ್ಯಕ್ಷ ಅಥವಾ ಪರೋಕ್ಷವಾಗಿರಲಿ, ಚಿಕ್ಕದು ಅಥವಾ ದೊಡ್ಡದಿರಲಿ, ಅದನ್ನು ಬೆಳಕಿಗೆ ತರುವುದು, ಪ್ರತಿಭಟಿಸುವುದು, ಪ್ರಚಾರ ಮಾಡುವುದರ ಮೂಲಕ ಅದನ್ನು ಸಾರ್ವಜನಿಕಗೊಳಿಸಲಾಯಿತು. ಮಹಿಳಾ ಚಳುವಳಿ ನಿರಂತರವಾಗಿ ನಡೆಸಿದ ಈ ಪ್ರಯತ್ನದ ಫಲವಾಗಿ ಮಹಿಳೆಯರ ಮೇಲೆ ನಡೆಸಲಾಗುತ್ತಿರುವ ವಿವಿಧ ರೀತಿಯ ಹಿಂಸೆಯ ಮಾದರಿಗಳು, ಸ್ವರೂಪಗಳು ಬೆಳಕಿಗೆ ಬರತೊಡಗಿದವು. ಈ ರೀತಿಯ ಹಿಂಸೆಯ ಸ್ವರೂಪಗಳು ಇದುವರೆಗೂ ಪಿತೃಪ್ರಧಾನ ಸಮಾಜ ತನ್ನನ್ನು ತಾನು ಕೇಳಿಕೊಳ್ಳಲಾಗದ, ಉತ್ತರಿಸಲಾಗದ ಪ್ರಶ್ನೆಗೆ ದಾರಿ ಮಾಡಿಕೊಟ್ಟಿತು. ಈ ಪ್ರಶ್ನೆಗಳು, ಕೌಟುಂಬಿಕ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಕಾನೂನು ಕ್ಷೇತ್ರದಲ್ಲಿ ಸ್ತ್ರೀಯರ ಬಗೆಗಿರುವ ದ್ವಿಮುಖ ನೀತಿಯನ್ನು ಢಾಂಬಿಕತೆ, ಪೊಳ್ಳುತನವನ್ನು ಬಯಲಿಗೆಳೆಯಿತಲ್ಲದೆ, ಅವುಗಳ ಪುನರ್ ಮೌಲೀಕರಣಕ್ಕೆ ಒತ್ತಾಯಿಸತೊಡಗಿತು.

ನಮ್ಮ ಸಮಾಜದಲ್ಲಿ ಬಲವಾಗಿ ಬೇರೂರಿರುವ ಪಿತೃಪ್ರಧಾನತೆ, ಬದಲಾಗುತ್ತಿರುವ ಆರ್ಥಿಕ ಸಂಬಂಧಗಳು, ನೀತಿ, ಜಾತಿ ಸ್ವರೂಪ ಹಾಗೂ ರಾಜಕೀಯ ಸಂಬಂಧಗಳ ಜೊತೆಗೆ ಸುಲಭವಾಗಿ, ಅಷ್ಟೇ ಪ್ರಧಾನವಾಗಿ ತಳುಕು ಹಾಕಿಕೊಂಡಿರುತ್ತದೆ. ಈ ಕಾರಣದಿಂದಾಗಿ ಸ್ತ್ರೀಯರ ಮೇಲೆ ನಡೆಯುವ ಹಿಂಸೆ ತೀವ್ರಗೊಳ್ಳುವುದರ ಜೊತೆಗೆ ಹಿಂಸೆಯ ಸ್ವರೂಪವೂ ಸಂಕೀರ್ಣಗೊಳ್ಳುತ್ತಾ ಹೋಗುತ್ತಿದೆ. ರಾಜಾಸ್ಥಾನದಲ್ಲಿ ಸ್ತ್ರೀಯರ ಮೇಲೆ ತೀವ್ರಗೊಳ್ಳುತ್ತಿರುವ ಹಿಂಸೆ ಒಂದು ನಿರ್ಧಿಷ್ಟ ನಿದರ್ಶನ.

ಸ್ತ್ರೀಯರು ತಮ್ಮ ಮೇಲೆ ನಡೆಯುತ್ತಿರುವ ಶೋಷಣೆಯನ್ನು ಗುರುತಿಸಿ ಅರಿವು ಮೂಡಿಸಿಕೊಳ್ಳಬೇಕಾಗಿದೆ. ಅರಿವಿನ ಜೊತೆಗೆ ಪ್ರತಿಭಟನೆಯ ಮನೋಭಾವನೆಯನ್ನು ರೂಪಿಸಿಕೊಳ್ಳುವುದರ ಜೊತೆಗೆ ತನ್ನ ಶೋಷಣೆಯು ಸಮಾಜದ ರಚನೆ, ಹಾಗೂ ಇತರ ಶೋಷಿತ ಜನಾಂಗಕ್ಕೆ ಇರುವ ಸಾವಯುವ ಸಂಬಂಧವನ್ನು ಗುರುತಿಸಿಕೊಳ್ಳುವುದೇ ''ಸ್ತ್ರೀ ಸಮಸ್ಯೆಯ ರಾಜಕೀಯ ಸ್ವರೂಪ. ತನ್ನ ಮೇಲೆ ನಡೆಯುತ್ತಿರುವ ಹಿಂಸೆಯ ಅರಿವು ಸ್ತ್ರೀಯರಿಗಿದ್ದರೂ, ಅದನ್ನು ಸಾಮೂಹಿಕವಾಗಿ, ಗುಂಪುಗಳಲ್ಲಿ ಹಂಚಿಕೊಳ್ಳುವುದು ಹಾಗೂ ಪ್ರತಿಭಟಿಸುವುದು, ಇದು ಸ್ತ್ರೀಯೊಬ್ಬಳು ಸಶಕ್ತತೆಯನ್ನು ನೀಡುವ ಹಾಗೂ ಪಡೆಯುವ ಪ್ರಕ್ರಿಯೆ. ಈ ಮಾದರಿಯ ಸ್ತ್ರೀಯರ ಸಂಘಟನೆ, ಇತರ ಸಂಪ್ರದಾಯ ಮಾದರಿಗಿಂತ ವಿಭಿನ್ನವಾದುದು. ಸ್ತ್ರೀ ಸಂಘಟನೆಯ ಈ ಪ್ರಕ್ರಿಯೆ ಸ್ತ್ರೀ ಸಮಸ್ಯೆಯ ಸೂಕ್ಷ್ಮಾತಿಸೂಕ್ಷ್ಮ ಆಯಾಮಗಳನ್ನು ಗುರುತಿಸಲು ಪ್ರೇರಣೆ ನೀಡಿದ ಮಾದರಿಯಾಗಿದೆಯೆನ್ನಬಹುದು.

*- ಸಂಪಾದಕೀಯ ಮಂಡಳಿ*

# ಕೌಟುಂಬಿಕ ಕ್ರೌರ್ಯ

ದಿನಾಂಕ 2-11-1997ರಂದು ಮಾನಸ "ಮಹಿಳೆ ಮತ್ತು ಕ್ರೌರ್ಯ"ದ ವಿವರ ಆಯಾಮಗಳನ್ನು ಕೂಲಂಕುಶವಾಗಿ ಚರ್ಚಿಸುವ ಉದ್ದೇಶದಿಂದ ವಿಚಾರ ಸಂಕಿರಣವನ್ನು ಹಮ್ಮಿಕೊಂಡಿತ್ತು. ಈ ಸಂಕಿರಣದ ಮೊದಲನೆ ಗೋಷ್ಠಿ 'ಕೌಟುಂಬಿಕ ಕ್ರೌರ್ಯ'ದಲ್ಲಿ ಮಹಿಳೆಯರು ಹಂಚಿಕೊಂಡ ಅನುಭವಗಳು ಸ್ತ್ರೀಯರ ಮೇಲೆ ನಡೆಯುತ್ತಿರುವ ಅಮಾನುಷ ಹಿಂಸೆಯ ವಿವಿಧ ಸ್ವರೂಪವನ್ನು ಬೆಳಕಿಗೆ ತಂದಿವೆ.

ನನ್ನ ಹೆಸರು ಸಾವಿತ್ರಿ, ನಾನು ನನ್ನ ಬದುಕಿನ ಅನುಭವ ಹೇಳುತ್ತಾ ಇದೀನಿ. ನನ್ನ ಗಂಡ ನನ್ನನ್ನು ಇಷ್ಟಪಟ್ಟು ಮದುವೆಯಾದ. ಎಲ್ಲರ ಮಾತು ಮೀರಿ ಹಠ ಮಾಡಿ ನನ್ನನ್ನ ಮದುವೆಯಾದ. ಮದುವೆಯಾದ ಒಂದು ತಿಂಗಳು ಚೆನ್ನಾಗೇ ಇದ್ದೆವು. ನನ್ನ ಅತ್ತೆಗೆ ತನ್ನ ಮೊಮ್ಮಗಳನ್ನ ತಂದುಕೊಳ್ಳಬೇಕೆಂದು ಆಸೆ ಇತ್ತು. ಅವಳು ನನ್ನ ಕೈ ಊಟ ತಿಂತಾ ಇರಲಿಲ್ಲ, ನನ್ನನ್ನು ನನ್ನ ಗಂಡನಿಂದ ದೂರ ಮಾಡಲಿಕ್ಕೆ ಪ್ರಯತ್ನಿಸೋರು. ನಾನು ಮಾಡಿದ ಹಿಟ್ಟು-ಅನ್ನ ಎಲ್ಲದರಲ್ಲಿ ಕೂದಲು, ಮಣ್ಣು ಹಾಕಿ ಇರೋರು. ಗಂಡನಿಗೆ ಬಡಿಸುವಾಗ ನನ್ನ ಹಿಡಿದು ಹೊಡೆಯೋದು. ಅತ್ತೆ ಹಾಕಿದ್ದು ಅಂತ ಗೊತ್ತಿದ್ದೂ ನಾನು ಸುಮ್ಮನೆ ಮೂಕವಾಗಿ ಏಟು ತಿಂತಾ ಇದ್ದೆ. ಗಂಡ ಅಂದ್ರೆ ತುಂಬಾ ಪ್ರೀತಿ ನನಗೆ. ಗಂಡನೇ ಬೇಕು ಅಂತ ಅವನು ಹೊಡೆದ್ರೂ ಹೊಡಸ್ಕೊಂಡು ಇರ್ತಾ ಇದ್ದೆ. ನಾವಿದ್ದದ್ದು ಹಳ್ಳಿ ಕಡೆ. ಅಲ್ಲೆಲ್ಲಾ ಕಕ್ಕಸಿಗೆ ಹೋಗಬೇಕಾದ್ರೆ ಮರಗಳ ಸಂದೀಲಿ ಹೋಗಬೇಕು. ಒಂದಿನಾ ನಾನು ಕಕ್ಕಸಿಗೆ ಹೀಗೆ ಹೋದಾಗ ನಮ್ಮತ್ತೆ ಹೊಲದಲ್ಲಿದ್ದ ಮಗನಿಗೆ, ನಿನ್ನ ಹೆಂಡತಿ ಯಾರೋ ಹುಡುಗನ ಜತೆ ಮಲಗಿದ್ದಾಳೆ ಮರದ ಸಂದೀಲಿ ಅಂತ ಚಾಡಿ ಹೇಳಿಕೊಟ್ಟರು. ಅಲ್ಲಿಂದ ಬಂದ ನನ್ನ ಗಂಡ ನನ್ನನ್ನ ಚೆನ್ನಾಗಿ ಹೊಡೆದು ಮನೆ ಒಳಗೆ ಹಾಕಿ ಬಾಗಿಲಾಕಿದ. ನಮ್ಮತ್ತೆ ಕಟ್ಟಿಗಾರ ಒಲೇಲಿಟ್ಟು ಚೆನ್ನಾಗಿ ಕಾಯ್ಸಿ ಅವಳಿಗೆ ಇಡು ಅಂತ ಹೇಳಿ ಬಾಗಿಲಾಕಿಕೊಂಡು ಹೊರಗೆ ಬಂದ್ರು. ನನ್ನ ಗಂಡ ನನ್ನನ್ನ ಮೈಮೇಲೊಂದಿಷ್ಟು ಬಟ್ಟೆ ಇಲ್ಲದಂಗೆ ಕಟ್ಟಿಹಾಕಿ ನನಗೆ ಬರೆ ಇಟ್ಟ. 5-6 ಕಡೆ ಮೈಮೇಲೆ ಚೆನ್ನಾಗಿ ಸುಡೋ ಕಬ್ಬಿಣದಿಂದ ಬರೆ ಹಾಕಿ ಕರಕೊಂಡು ಹೋಗಿ ನನ್ನ ಅಣ್ಣನ ಮನೇಲಿ ಬಿಟ್ರು. ನನ್ನಣ್ಣ ಎಲ್ಲಾರ್ನೂ ಕರ್ಸಿ ನ್ಯಾಯ ಪಂಚಾಯತಿ ಮಾಡಿದ ಮೇಲೆ ನನ್ನ ಗಂಡ ನಾನು ಮಾಡಿದ್ದು ತಪ್ಪಾಯ್ತು, ನನ್ನ ಹೆಂಡ್ತೀನ ಕಳ್ಸು, ಇನ್ನೊಂದು ಸಲ ಹೀಗೆ ಮಾಡೋದಿಲ್ಲ ಅಂತ ಕೇಳಿಕೊಂಡ. ಮನೆಗೆ ಕರಕೊಂಡು ಹೋದ. ಆಗ ನಾನು ತುಂಬಿದ ಗರ್ಭಿಣಿ. ನನ್ನ ಅತ್ತೆ ಮಗು ಹೋಗ್ಬಿಡಲಿ ಅಂತ ಹೊಟ್ಟೇಕಿಚ್ಚಿಗೆ ಪರಂಗಿಕಾಯಿ, ಎಳ್ಳು-ಬೆಲ್ಲ ಎಲ್ಲ ತಿನ್ನಕ್ಕೆ ಕೊಡ್ತಾ ಇದ್ರು. ಹಲ್ಲಿ ಮೊಟ್ಟೇನ ಮಜ್ಜಿಗೇಲಿ ಹಾಕಿ ಕೊಡ್ತಾ ಇದ್ರು ಕುಡಿಯಕ್ಕೆ. ನಾನು ಮಾತ್ರ ಇದ್ಯಾವುದನ್ನು ತಿಂತಾ ಇರ್ಲಿಲ್ಲ. ಗಂಡನಿಗೆ ಹೇಳಿದ್ರೆ ಅವನು ನನಗೇ ಹೊಡೆಯುವವನು. ಹೆರಿಗೆಗಂತ ತಾಯಿ ಮನೆಗೆ ಬಂದ ಮೇಲೆ (ಅದೂ ಕಳಿಸಲು ಅತ್ತೆ ತಯಾರಿರಲಿಲ್ಲ) ನಾನು ಮತ್ತೆ ಅತ್ತೆ ಮನೆಗೆ ಬರೋದಿಲ್ಲ. ಇಲ್ಲೇ ಬಾಡಿಗೆ ಮನೆ ಮಾಡಿಕೊಂಡು ಇರೋಣ ಅಂತ ಗಂಡನನ್ನ ಒಪ್ಪಿಸಿ ಬಾಡಿಗೆ ಮನೇಲಿದ್ವಿ. ಒಂದು ಸಣ್ಣ ಸೈಟ್ ತಗೋಳೋಣಾ ಅಂತ ಚೀಟಿ ಹಾಕಿದ್ದೆ. ಸರ್ಕಾರದಿಂದ ಮನೇನು ಸಿಕ್ತು. ಮೂರು ಮಕ್ಳು ಆದವು. ಚೆನ್ನಾಗಿ ಇದ್ವಿ. ಮತ್ತೆ ನನ್ನ ಗಂಡ ಸರ್ಕಾರಿ ಕೆಲಸಕ್ಕೆ ಸೇರಲಿಕ್ಕಂತ ದುಡ್ಡು ಕೇಳ್ದ. 13 ಸಾವಿರ ಹಣ ಹೊಂದಿಸು ಅಂದ. ಪಕ್ಕದಲ್ಲಿ ಒಬ್ಬ ಮುದುಕಪ್ಪ ಬಡ್ಡೀಗೇ ಹಣ ಕೊಡ್ತಾ ಇದ್ರು. ಅವನಿಂದ 6 ಸಾವಿರ ತಗೊಂಡು ಕೆಲಸಕ್ಕೆ ಸೇರಿದ್ದ. ಆ ಮುದುಕ ಮುಂದೆ ಹಣ ಕೇಳಿದ್ರೆ, ನೀನೇ ಹೋಗಿ ಅವನತ್ರ ಮಲಕ್ಕೋ, ಹಣ ಎಲ್ಲ ತೀರೋಗುತ್ತೇ ಅನ್ನೋನು. ಮತ್ತೆ ನನ್ನ ಮೇಲೆ ಅನುಮಾನ, ಅನುಮಾನ, ಮನೇಲಿ ಟಿ.ವಿ., ರೇಡಿಯೋ ಎಲ್ಲ ಜೋರಾಗಿ ಹಾಕಿ ನನ್ನ ಹಿಡಕೊಂಡು ಹೊಡೆಯೋದು, ನಾನು ಒಂದಿನ ತಾಳಲಾರದೆ ಧರ್ಮಸ್ಥಳಕ್ಕೆ ಮಕ್ಕಳು-ಮರಿ ಎಲ್ಲ ಬಿಟ್ಟು ಹೋಗಿಬಿಟ್ಟೆ. ಎರಡು ದಿವಸ ಇದ್ದೆ. ಮೂರನೇ ದಿವಸ ಹುಡಕೊಂಡು ಬಂದು, ಎಳಕೊಂಡು ಹೋದ. ನನ್ನನ್ನ ಚೆನ್ನಾಗಿ ಹೊಡೆದು ಮತ್ತೆ ಕಬ್ಬಿಣ ಕಾಯಿಸಿ ಬರೆ ಇಟ್ಟ. ತಾಯಿ ಮನೆಗೆ ಹೋಗಬಹುದು ಅಂತ ಕೆಲಸಕ್ಕೆ ಹೋಗುವಾಗ ಬೀಗ ಹಾಕಿಕೊಂಡು ಹೋಗೋದು. ತಪ್ಪಿಸಿಕೊಂಡು ಹೋಗಕ್ಕೂ ಆಗ್ತಾ ಇರ್ಲಿಲ್ಲ. ಒಂದಿನಾ ಹೇಗೋ ತಪ್ಪಿಸಿಕೊಂಡು ತಮಿಳುನಾಡು ಕಾಡಲ್ಲಿ ಹೋಗಿ ರಾತ್ರಿ ಎಲ್ಲ ಅಲ್ಲೇ ಕೂತಿದ್ದೆ. ನನ್ನ ಗಂಡ ಹುಡಕ್ತಾನೇ ಇದ್ದ. ಎಷ್ಟೋ ದಿನದ ಮೇಲೆ ಕಂಡುಹಿಡಿದು ಎಳಕೊಂಡು ಬಂದ. ಸಾಯೋ ಹಂಗೆ ಬಡಿದು ರೀಸಸ್ ಮಾಡೋ ಜಾಗದಲ್ಲಿ ರಾಡ್ ತುರುಕಿದ. ಮೈತುಂಬ ಬರೆ ಇಟ್ಟ. ಏನೂ ತೋಚದೆ ಪೋಲಿಸರತ್ರ ಹೋದೆ. ಪೋಲೀಸರು ಅವನು ಹೊಡೀಲಿ, ಬಡೀಲಿ ಗಂಡನತ್ರ ಇರಬೇಕಮ್ಮ ಅಂತ ಬುದ್ಧಿ ಹೇಳಿದ್ರು. ಅಣ್ಣನ ಮನೆಗೆ ಹೋಗಿ ಬಂದದ್ದು ಗೊತ್ತಾಗಿ ಅಣ್ಣನ ಜತೆಗೇ ಮಲಕ್ಕೋ ಅಂತ ರಂಪ ಮಾಡಿದ. ಮಕ್ಕಳನ್ನು ಬಿಟ್ಟು ಬಂದದ್ದು ಮನಸ್ಸು ತಾಳದೆ ಮತ್ತೆ ಗಂಡನ ಮನೆಗೇ

ಹೋದೆ. ಅವನು ಕೊಡೋ ಹಿಂಸೆ ತಡೆಯಕ್ಕೆ ಆಗ್ತಾನೇ ಇರಲಿಲ್ಲ. ಯಾವಾಗಲೂ ಬೆಂಕಿ(ಬರೆ) ಇಡೋನು. ಇಡಬಾರದೆ ಜಾಗದಲ್ಲೇ ಇಡೋನು. ಕಾಯಿಸಿದ ರಾಡೆಲ್ಲ ಒಳಗೆ ತುರುಕೋನು. ಇನ್ನೇನು ಸಾಯೋ ಸ್ಥಿತಿ ಬಂದಾಗ ನಾನು ಮಕ್ಕಳು, ತಂದೆ-ತಾಯಿ ಎಲ್ಲ ಬಿಟ್ಟು 'ವಿಮೋಚನ'ಕ್ಕೆ ಬಂದೆ. ಅಲ್ಲೂ ಬಂದು ರಂಪ ಮಾಡ್ದ. ಕೊನೆಗೆ ಎರಡು ಮಕ್ಕಳು ತಂದು ಬಿಟ್ಟು ಹೋದ. ಈಗ ಎರಡು ಮಕ್ಕಳು ನೋಡ್ಕಂಡು, ಮನೆಕೆಲಸ ಮಾಡಿಕೊಂಡು ಇದ್ದೇನೆ.

* * *

ನನ್ನ ಹೆಸರು ಮಂಜುಳ ಅಂತ. ನನಗೀಗ ಐವತ್ತು ವರ್ಷ. ಮದುವೆ ಆಗಿ 20 ವರ್ಷ ಆಯ್ತು. ನನಗೆ ಮೂರು ಮಕ್ಕಳು. ಯಜಮಾನ್ರು ಒಳ್ಳೇ ಕೆಲಸದಲ್ಲಿದ್ದಾರೆ. ಮದುವೆಯಾಗಿ 10 ವರ್ಷ ಚೆನ್ನಾಗಿದ್ವಿ. ಆಮೇಲೆ ಅವರಿಗೆ ಅವರ ಅಕ್ಕನ ಮಗಳ ಸಂಬಂಧ ಶುರುವಾಯ್ತು. ಅವಳಿಗೆ ಮದ್ವೆ ಆಗಿ ಗಂಡನ್ನ ಬಿಟ್ಟು ಮಕ್ಕಳ ಜತೆ ಇದ್ಲು. ಅವಳ ಸಂಬಂಧ ಶುರು ಆದ ಮೇಲೆ ನನಗೆ ಹಿಂಸೆನೂ ಶುರು ಆಯ್ತು. ಪ್ರತಿ ದಿವಸ ಹೊಡೆಯೋದು, ಸೀಮೆಣ್ಣೆ ತಂದಿಟ್ಟು ಸುರ್ಕೊಂಡು ಸಾಯಿ ಅನ್ನೋದು, ಕಟ್ಹಾಕೋದು, ತುಂಬಾ ಹಿಂಸೆ ಕೊಡೋದು. ಕೊನೆಗೆ ನನ್ನ ಮಕ್ಕಳಿಗೆ ನೋಡಕ್ಕಾಗದೆ, ಅಮ್ಮ, ನೀನು ನಿನ್ನ ತಾಯಿ ಮನೆಗೆ ಹೋಗಿಬಿಡು ಅಂತ ಬಲವಂತ ಮಾಡಿದ್ರು. ತಾಯಿ ಮನೆಯವರು ಪೊಲೀಸ್ ಕಂಪ್ಲೇಂಟು ಕೊಟ್ರು. 15 ದಿವಸ ಅಲ್ಲಿದ್ದು ಮತ್ತೆ ಮತ್ತೆ ಹೋದೆ. ಮತ್ತೆ ತುಂಬಾ ಹೊಡೆಯಕ್ಕೆ ಶುರು ಮಾಡಿದ್ರು. ರಾತ್ರಿ ಹೊತ್ತು ಮನೆಗೆ ಬರ್ತಾ ಇರ್ಲಿಲ್ಲ. ಕೇಳಿದ್ರೆ OT ಮಾಡ್ತಾ ಇದೀನಿ ಅನ್ನೋವರು. ನಾನು ಆಚೆ ಹೋಗಿ ಪ್ರಪಂಚ ಗೊತ್ತಿದ್ದವಳಲ್ಲ. ಇರಬಹುದು ಅಂದುಕೊಂಡೇ ಇರ್ತಿದ್ದೆ. ನನ್ನ ಮಗನಿಗೆ ಕಾಯಿಲೆ. ಮಧ್ಯ ರಾತ್ರೀಲೀ ಆಸ್ಪತ್ರೆಗೆ ಕರಕೊಂಡು ಹೋಗಬೇಕಾಗುತ್ತಿತ್ತು. ಇವರು ಮಾತ್ರ ಮನೇಲಿರ್ತಾ ಇರಲಿಲ್ಲ. ಎಲ್ಲ ಸಹಿಸ್ಕೊಂಡು ಇರ್ತಾ ಇದ್ದೆ. ಅವರು ಮಾತ್ರ ದುಡ್ಡಿಗೋಸ್ಕರ ನನಗೆ ಏನೆಲ್ಲ ಕಷ್ಟ ಕೊಡ್ತಾ ಇದ್ರು. ಆ ಅಕ್ಕನ ಮಗಳ ಹತ್ರ ಸ್ವಲ್ಪ ದುಡ್ಡಿತ್ತು. ನನಗೆ ಕೊನೆ ಕೊನೆಗೆ ಹಿಂಸೆ ಎಷ್ಟು ಜಾಸ್ತಿ ಆಯಿತೆಂದರೆ ನನ್ನ ಮಗ ದೊಡ್ಡೋನು, 'ಅಮ್ಮ, ನೀನಿಲ್ಲಿದ್ರೆ ಸಾಯೋದು, ಗ್ಯಾರಂಟಿ, ಹೇಗಾದ್ರೂ ತಾಯಿ ಮನೆಗೆ ಹೋಗು ಅಂತ ಸ್ನೇಹಿತನ ಹತ್ರ ಹೋಗಿ 5 ರೂಪಾಯಿ ತಂದುಕೊಟ್ಟ. ಆ 5 ರೂಪಾಯಿ ತಗೊಂಡು ತಾಯಿ ಮನೆಗೆ ಬಂದುಬಿಟ್ಟೆ. ಆಮೇಲೆ ಮಕ್ಕಳನ್ನು ನೋಡಲಿಕ್ಕಂತ ಶಾಲೆ ಹತ್ರ ಹೋದ್ರೆ ತುಂಬಾ ಜಗಳ ಕಾಯೋದು, ಬರಕೂಡದು ಅಂತ. ಚಿಕ್ಕ ಮಗಳು ಮಾತ್ರ ನನ್ನ ಹತ್ರ ಓಡಿ ಬಂದುಬಿಟ್ಟಳು. ಒಮ್ಮೆ ಹೇಗೋ ವಿಮೋಚನ ಅಡ್ರೆಸ್ ಸಿಕ್ತು. ವಿಮೋಚನ ಸಹಾಯದಿಂದ ಕೇಸೂ ಹಾಕ್ದೆ. ಹಾಗೇ ವಾರಕ್ಕೊಮ್ಮೆ ಮಕ್ಕಳನ್ನ ನೋಡಲಿಕ್ಕೆ ಅವಕಾಶ ಸಿಕ್ಕೋ ಹಾಗೆ ಮಾಡಿದ್ದಾರೆ. ಈಗ ಕೇಸು ನಡೀತಾ ಇದೆ. ಈಗ ದೊಡ್ಡ ಮಗ ಕೇಸು ವಾಪಸ್ಸು ತಗೋ ಅಂತ ಕೂತಿದಾನೆ. ಹುಡುಗ ದೊಡ್ಡೋನಾಗಿದಾನೆ. ಕಾಲೇಜಿಗೆ ಹೋಗ್ತಾನೆ. ಚೆನ್ನಾಗಿ ಓದುತ್ತಿದ್ದಾನೆ. ನೀನು ಕೇಸು ವಾಪಸ್ಸು ತಗೊಳ್ಳದಿದ್ದರೆ ನಾನೇ ಮನೆ ಬಿಟ್ಟು ಹೋಗ್ತೀವಿ ಅಂತ ಕೂತಿದಾನೆ. ಮಕ್ಕಳನ್ನ ನೋಡಿದರೆ ಮನಸ್ಸು ತಡೆಯಲ್ಲ. ಆದರೆ ಕೇಸು ವಾಪಸ್ಸು ತಗೊಂಡಿಲ್ಲ. ವಿಮೋಚನದವರು ಹೇಗೆ ಹೇಳುತ್ತಾರೋ ಹಾಗೆ ಮಾಡುತ್ತೇನೆ.

* * *

ಈ ಹುಡುಗಿ ಹೆಸರು ಜಯಂತಿ. ಗಂಡನಿಗೆ ಒಳ್ಳೇ ಕಡೆ ಕೆಲ್ಸ. ಬೇಕಾದಷ್ಟು ವರದಕ್ಷಿಣೆ ಕೊಟ್ಟಿದಾರೆ. ಸಾಕಷ್ಟು ಚಿನ್ನ-ಬೆಳ್ಳಿ ಎಲ್ಲ. ಈ ಹುಡುಗೀಗೆ ಮದುವೆ ಆದ ಮೇಲೆ ಗಂಡ ಅವಳಿಗೆ ಮೈಮೇಲೆ ಬಲಗಡೆಯಲ್ಲಿ ಗಾಯದ ಗುರುತಿರೋದನ್ನ ಕಂಡು ಹಿಡಿದ. ತುಂಬಾ ಅನುಮಾನಪಟ್ಟ. ಏನೋ ಆಗಿದೆ ಅಂತ ತನ್ನ ತಾಯಿಯನ್ನು ಕರೆದು ತಂದು ತೋರಿಸಿದ. ಸಣ್ಣ ಹುಡುಗಿ ಆಗಿದ್ದಾಗ ಆಡೋವಾಗ ಬಿದ್ದು, ಈಳಿಗೆ ಮನೆ ತಗುಲಿ ಗಾಯವಾಗಿತ್ತು. ಒಂದು ಹೊಲಿಗೆ ಆಗಿದ್ರು ಅಷ್ಟೆ ಎಂದು ಈ ಹುಡುಗಿ ಎಷ್ಟು ಬಿಡಿಸಿ ಹೇಳಿದ್ರೂ ನಂಬಿಕೆ ಇಲ್ಲ. ಏನೋ ಆಗಿದೆ, ಏನೋ ಆಗಿದೆ, ಅನುಮಾನ, ಅನುಮಾನ. ಅವಳಿಗೆ ತುಂಬಾ ಹಿಂಸೆ ಕೊಟ್ರು. ಕೊನೆಗವಳು ವಿಮೋಚನಾಕ್ಕೆ ಬಂದಳು. ಗಂಡನನ್ನು ಕರೆಸಿ ಹೇಳಿದ ಮೇಲೆ ಒಲ್ಲದ ಮನಸ್ಸಿಂದ ಕರಕೊಂಡು ಹೋದ. ನಂತರ ಅವಳ ತಂದೆ-ತಾಯಿ ನೋಡಲಿಕ್ಕೆ ಬರಕೂಡದು. ಅವರು ನಮಗೆ ಮೋಸ ಮಾಡಿಬಿಟ್ಟಿದಾರೆ, ಮುಚ್ಚಿಟ್ಟು ಮದುವೆ ಮಾಡಿದಾರೆ ಅಂತೆಲ್ಲಾ ಕಂಡೀಷನ್ ಹಾಕಿದ್ರು. ಒಮ್ಮೆ ನಾವು ಅವಳನ್ನು ನೋಡಲಿಕ್ಕೆಂದು ಮನೆಗೆ ಹೋದರೆ, ತಲೆ ಬಾಚದೆ, ಬಳೆ ಹಾಕದೆ, ಮಾಸಲು ಸೀರೆ ಉಟ್ಕೊಂಡು ವಿಚಿತ್ರವಾಗಿದ್ಲು. ಅತ್ತೆ ಬಂದು, "ನೋಡಿದ್ರು, ಹೇಗಿದಾಳೆ, ಒಳ್ಳೇ ಮೂದೇವಿ ತರ" ಅಂತ ಮೂಗು ಮುರಿದ್ಲು. ನಾವು ಜಯಂತಿಯನ್ನು ಯಾಕೆ ಹೀಗೆ ಅಂತ ಕೇಳಿದ್ರೆ, ಆಗ ತಿಳಿಯಿತು, ಅವಳು ಬಳೆ ಹಾಕಬಾರದು, ತಲೆ ಬಾಚಿ ಜಡೆ ಹಾಕಬಾರದು (ಉದ್ದ ಕೂದಲು ಅವಳಿಗೆ), ಬ್ರಾ ಹಾಕಬಾರದು, ಒಳ್ಳೇ ಸೀರೆ ಉಡಬಾರದು ಅಂತ ಅತ್ತೆಯ ಆಜ್ಞೆ. ಜಯಂತಿ ಮತ್ತು ಮಗುವನ್ನ ಬೇರೆ ಇಟ್ಟು (ಅವಳಿಗೆ ಒಂದು ಮಗು ಕೂಡ) ದಿನಕ್ಕೆ ಎರಡು ಬದನೆಕಾಯಿ, ಇಷ್ಟು ಬೀನ್ಸು ಕೊಟ್ಟು ಬೇಯಿಸಿ ಉಣ್ಣು ಎಂದು ಹೇಳುವುದು. ಮಗ ನಮ್ಮ ಮನೇಲಿ ನಮ್ಮ ಜತೆಯಲ್ಲಿ ಉಣ್ಣುತ್ತಾನೆ. ಈ ಹುಡುಗಿ ಯಾರ ಹತ್ತಿರ ಹೇಳಬೇಕು, ತಂದೆ ತಾಯಿ ಹತ್ರ ಮಾತನಾಡಲು ಹೋದರೆ, "ನೀವು ಏನಾದರೂ ಮಾಡಿ ಮೇಡಂ, ಅವಳನ್ನ ಮಾತ್ರ ನಮ್ಮ ಮನೆಗೆ ಕಳಿಸಬೇಡಿ, ನಮಗೆ ಮದುವೆಗೆ ಬೆಳೆದ ಇನ್ನೊಂದು ಮಗಳಿದಾಳೆ" ಅಂತಾರೆ.

ಹೀಗೆ ನಡೀತಾ ಇದ್ದಾಗ ಒಂದಿನಾ ಕೋರ್ಟ್ ಹತ್ತಿರ ನಮ್ಮ ವಿಮೋಚನಾದ ಸ್ನೇಹಿತೆಯೊಬ್ಬರು ಜಯಂತಿ ಮತ್ತು ಅವಳ ಗಂಡನನ್ನ ನೋಡಿದಾರೆ. ಅವರ ಜತೆಗೆ ಲಾಯರ್ ಇದಾರೆ. ಏನು-ಎತ್ತ ಅಂತ ವಿಚಾರಿಸಿದ್ರೆ, "ಏನೋ ಗೊತ್ತಿಲ್ಲ ಮೇಡಂ, ಹದಿನೈದು ದಿವಸ ತಾಯಿ ಮನೆಗೆ ಹೋಗಲಿಕ್ಕೆ ಈ ಪೇಪರಿಗೆ ಸಹಿ ಮಾಡು ಅಂದ್ರು, ಮಾಡಿದೆ" ಅಂದಳು. ಅದೇನು ಪೇಪರೆಂದು ನೋಡಿದರೆ ವಿಚ್ಛೇದನಕ್ಕೆ ಪರಸ್ಪರ ಒಪ್ಪಿಗೆ (mutual content) ಅಂತ ಇರೋ ಪೇಪರು! ನಮ್ಮ ಸ್ನೇಹಿತೆ ಸ್ವಲ್ಪ ಗಲಾಟೆ ಮಾಡಿ ಜಯಂತಿಯನ್ನು ಆಫೀಸ ಹತ್ತಿರ ಬರಲಿಕ್ಕೆ ಹೇಳಿ ಬಂದರು. ಒಂದು ತಿಂಗಳಾದರೂ ಅವಳು ಬರದಿದ್ದಾಗ ತಂದೆ ಮನೆಯಲ್ಲಿ ವಿಚಾರಿಸಿದೆವು. ಅವರು ಏನೂ ಗೊತ್ತಿಲ್ಲ ಎಂದರು. ಗಂಡನ ಮನೆಗೆ ಹೋಗಿ ಕೇಳಿದರೆ, "ಹೌದು, ನಾವು ಪರಸ್ಪರ ಒಪ್ಪಿಗೆ ಆಧಾರದ ಮೇಲೆ ಡೈವೋರ್ಸ್ ತಗೋತೀವಿ. ಅವಳನ್ನ ನನ್ನ ಮನೆಯಲ್ಲೇ ಇಟ್ಕೊಂದು ನೋಡ್ಕೋತೀವಿ" ಅಂದ. ಡೈವೋರ್ಸ್‌ಗೆ ಹಾಕಿದ ಮೇಲೆ ಅವಳನ್ನ ಯಾಕೆ ಇಲ್ಲಿ ಇಟ್ಟುಕೊಂಡಿದ್ದೀರಿ. ತಂದೆ-ತಾಯಿಗೆ ಯಾಕೆ ತಿಳಿಸಿಲ್ಲ ಅಂದರೆ, 'ಇದು ಹೆಸರಿಗೆ ಮಾತ್ರ ಡೈವೋರ್ಸು. ಅವಳನ್ನ ನಾವೇ ಇಟ್ಕೊಂಡು ನೋಡ್ಕೋತೀವಿ. ಅವರ ತಂದೆ-ತಾಯಿ ಇಲ್ಲಿಗೆ ಬರಬಾರದು. ವಡವೆ ಎಲ್ಲ ಕೊಟ್ಟು ಬಿಡ್ತೀವಿ" ಅಂದರು! ಅವನು ಡೈವೋರ್ಸ್ ತಗೊಂಡ ಮೇಲೆ ಅವನು ಹೇಗೆ ಇವಳ ಗಂಡ ಅಲ್ಲ. ಅವನು ಹೇಗೆ ಇನ್ನೊಂದು ಮದುವೆ ಮಾಡಿಕೋಬಹುದು, ಎಂತೆಲ್ಲ ಜಯಂತಿಗೆ ವಿವರಿಸಿದ ಮೇಲೆ, ಕೊನೆಗೆ 'ಆಯ್ತು ಮೇಡಂ, ಡೈವೋರ್ಸ್ ಬೇಡ ಅಂತ ಹೇಳ್ತೀನಿ. ಬಲವಂತದಿಂದ ಸಹಿ ಹಾಕಿಸಿಕೊಂಡಿದಾರೆ ಅಂತ ಹೇಳ್ತೀನಿ" ಅಂತ ಒಪ್ಪಿಕೊಂಡಳು. ಅಂತಹ ಮುಗ್ಧೆ ಅವಳು! ಅವಳ ತಂದೆ ಈಗಲೂ ಹೇಗಾದ್ರೂ ಅವಳನ್ನ ಅವಳ ಗಂಡನ ಹತ್ತ ಬಿಟ್ಟುಬಿಡಿ ಅಂತಾನೇ ಕೇಳ್ತಾ ಇದಾರೆ. ನಾವು ಹೇಗಾದ್ರೂ ಅವಳ ತಂದೆಯನ್ನ ಮನವೊಲಿಸಬೇಕು ಅಂತಲೇ ಓಡಾಡ್ತಾ ಇದೀವಿ. ಪೋಲೀಸರ ಹತ್ತಿರ ಹೋಗಿ ಅವಳ ವರದಕ್ಷಿಣೆ ರೂಪದ ವಸ್ತುವೆಲ್ಲ ಕೊಡಿಸಿ ಕೊಡಿ ಅಂತ ಕೇಳಿದರೆ, ಅವರ ಡೈವೋರ್ಸು ಕೇಸು ಕೋರ್ಟಲ್ಲಿ ನಡೀತಾ ಇದೆ. ಅದು ಮುಗೀಲಿ, ಕೊಡಿಸಿ ಕೋಡೋಣ ಅನ್ನುತ್ತಾರೆ. ಅದಕ್ಕೂ ಇದಕ್ಕೂ ಏನು ಸಂಬಂಧ ಎಂದು ವಿಚಾರಿಸಿದರೆ, 'ಹೋಗ್ರಿ ಕೊಡಿಸಿಕೊಡಲ್ಲ, ಅದೇನು ಮಾಡ್ತಿರೋ ಮಾಡ್ಕೋ ಹೋಗಿ". ಅವರು ಗಂಡ-ಹೆಂಡತಿ, ನಾಳೆ ಒಂದಾಗಬಹುದು. ಅವರ ಹತ್ತಿರ ಇದ್ರೆ ಏನಾಯ್ತು" ಅನ್ನುವ ಬದಲು ಉತ್ತರ ಪೋಲೀಸಿನವರದ್ದು. ಈ ಥರ ಪರಿಸ್ಥಿತೀಲಿ ಅವಳಿದ್ದಾಳೆ. ಆ ಕಡೆ ತಂದೆ ಮನೇಲಿ ಅವಳನ್ನ ಕಳಿಸಿದರೆ ಸಾಕು ಅನ್ನುವ ಸ್ಥಿತಿ. ಈ ಕಡೆ ಪೋಲೀಸರಿಂದ ಏನೂ ಒತ್ತಾಸೆ ಇಲ್ಲ. ಅವಳೇನು ಮಾಡಬೇಕು, ಎಲ್ಲಿ ಹೋಗಬೇಕು?

* * *

ಸುಧಾ ಅನ್ನೋ ಈ ಹುಡುಗಿ ಗಂಡನ ಹತ್ತಿರ ಹೋಗಲ್ಲ ಅಂತ ಹಠ ಹಿಡಿದಿದ್ದಾಳೆ. ಆ ಗಂಡ ನೋಡಿದ್ರೋ ತುಂಬಾ ಸಾತ್ವಿಕನಂತೆ ಕುಂಕುಮ ಇಟಕೊಂಡು, ಒಂದು ಕೆಂಪು ಟವಲ್ಲು ಹಾಕ್ಕೊಂಡು, ಚೆಪ್ಪಲಿ ಕೂಡ ಹಾಕ್ದೆ ತುಂಬಾ ಮೆದುವಂತೆ ಕಾಣುತ್ತಾನೆ. ಇವಳು ಯಾಕೆ ಹೀಗೆ ಹೇಳುತ್ತಾಳೆ ಅನ್ನೋದು ನಂಬಲಿಕ್ಕೆ ಕಷ್ಟ. ನಮ್ಮ 'ವಿಮೋಚನಾ'ಕ್ಕೆ ಬಂದಾಗ ನಾವು ಅವಳಿಗೆ ಅವನು ನಿನಗೆ ಯಾವುದೇ ಹಿಂಸೆ ಮಾಡದ ಹಾಗೆ ಅಗ್ರಿಮೆಂಟ್ ಮಾಡಿಸ್ತೀವಿ, ಪದೇ ಪದೇ ಬಂದು ನೋಡಿಕೊಂಡು ಹೋಗುತ್ತಿರುತ್ತೀವಿ ಅಂತೆಲ್ಲ ಒಪ್ಪಿಸಿ ಅಗ್ರಿಮೆಂಟಿಗೆ ತಯಾರು ಮಾಡಿದೆವು. ಕೊನೆಗೆ ಆ ಹುಡುಗಿ ನಮ್ಮನ್ನ ಒಳಗೆ ಕರೆದು ಹೇಳಿದಳು. ನೋಡಿ, ಆರು ತಿಂಗಳಿಂದ ನಾವು ನಿಮ್ಮತ್ರ ಹೇಳದೇ ಮುಚ್ಚಿಟ್ಟುಕೊಂಡಿರೋದನ್ನ ಹೇಳ್ತೀನಿ. ಈಗಲಾದರೂ ನನ್ನನ್ನ ಆ ಹುಲಿ ಬಾಯಿಗೆ ಕೊಡಬೇಡಿ ಅಂತ ಕೇಳಿಕೊಂಡಳು.

ಆ ಹುಡುಗ ಸಿನೆಮಾ ರೀಲುಗಳನ್ನ ಥಿಯೇಟರುಗಳಿಗೆ ಹಂಚುವ ಕೆಲಸ ಮಾಡುತ್ತಾನೆ. ಹಾಗೆ ಬ್ಲೂಫಿಲಂಗಳನ್ನೆಲ್ಲಾ ನೋಡ್ತಾನೆ. ನೋಡಿಕೊಂಡು ಬಂದು ಕೈಗೆ ಸಿಕ್ಕಿದ್ದನ್ನೆಲ್ಲಾ - ಮೊಟ್ಟೆ, ಬಾಳೆಹಣ್ಣು ಹೀಗೆ ಪ್ರತಿಯೊಂದನ್ನು ಅವಳ ಯೋನಿಯಲ್ಲಿ ತೂರಿಸುತ್ತಾನೆ. ಪ್ರತಿ ರಾತ್ರಿ ಬಲವಂತವಾಗಿ ಇವಳಿಗೆ ಬಿಯರ್ ಕುಡಿಸ್ತಾನೆ. ಹೀಗೆ ಹಿಂಸೆ ಕೊಡ್ತಾನೆ. ನನ್ನ ಕೈಯಲ್ಲಿ ಈತರ ನಡಕೊಳ್ಳಲು ಸಾಧ್ಯವಿಲ್ಲ, ಕಳಿಸಿದ್ರೆ ನಾ ಸಾಯ್ತೀನಿ ಅಂತ ಹಠ ಹಿಡಿದು ಕೂತಳು ಸುಧಾ. ನಾಲ್ಕು ಗೋಡೆ ಮಧ್ಯದ ಈ ಹಿಂಸೆಯನ್ನ ಯಾರು ಕೇಳ್ತಾರೆ?

ಹಾಗೇ ಮಾಗಡಿ ರೋಡಲ್ಲಿ ಇನ್ನೊಂದು ಹುಡುಗಿ. ಮದುವೆ ಆಗಿ ಒಂದು ತಿಂಗಳು ಕೂಡಾ ಆಗಿಲ್ಲ. ಗಂಡ, ಅವಳು ನನಗೆ ಲೈಂಗಿಕವಾಗಿ ಸಹಕಾರ ಕೊಡಲ್ಲ ಅಂತ ದೂರುತ್ತಾನೆ. ಪ್ರತಿ ರಾತ್ರಿ ಕಳೆದ ಮೇಲೂ ಅವನು ಹೀಗೆ ದೂರೋದು, ಅವಳು ನನಗೆ ಇದೆಲ್ಲ ಬೇಡ ಅಂತ ತಾಯಿ ಮನೆಗೆ ಹೋಗೋದು. ತಾಯಿ ಬುದ್ಧಿ ಹೇಳಿ ಕರಕೊಂಡು ಬಂದು ಬಿಟ್ಟು ಹೋಗೋದು. ಎಲ್ಲರ ಹತ್ತಿರ ಇವಳಿಗೆ ಲೈಂಗಿಕ ಆಸಕ್ತಿ ಇಲ್ಲ ಅಂತ ಹಬ್ಬಿಸಿದ. ಕೊನೆಗೆ ಇವಳು ತಾಯಿ ಹತ್ತಿರ ನಿಜ ಹೇಳಿಕೊಂಡಳು. ನಿಜ ಏನೆಂದರೆ, ಅವನು ಪ್ರತಿ ರಾತ್ರಿ ಇವಳಿಗೆ ಬಾಯಲ್ಲಿ ಸಂಭೋಗ ನಡೆಸುತ್ತಾನೆ. ಅವನು ನಾರ್ಮಲ್ ಆಗಿದ್ರೆ ನನಗೆ ಅವನ ಜತೆ ಇರಲಿಕ್ಕೆ ಏನೂ ಅಡ್ಡಿ ಇಲ್ಲ ಎಂದು ತೋಡಿಕೊಂಡಳು. ತಾಯಿಯಾದರೋ, ಎಲ್ಲವನ್ನೂ ಅವನಿಗೆ ಬಿಡಿಸಿ ಹೇಳಿ, ಬುದ್ಧಿ ಹೇಳು. ಕೈಕಾಲು ಹಿಡ್ಕೋ ಅಂದ್ರು. ಅವಳು ಕೈಕಾಲು ಹಿಡ್ಕೊಂಡು ಕೇಳಿಕೊಂಡಳು. ನಾರ್ಮಲ್ ಆಗಿ ಇರೋಣ. ಈತರ ಎಲ್ಲ ಮಾಡಿದರೆ ಭಯಂಕರ ಅಸಹ್ಯ ಆಗುತ್ತೆ. ದಿನಾ ವಾಂತಿಯಾಗುತ್ತೆ ಅಂತೆಲ್ಲ ಬೇಡಿಕೊಂಡಳು. 'ನೋಡು, ನೀನು ನನ್ನ ಹೆಂಡ್ತಿ, ನನಗೆ

ಇದರಲ್ಲೇ ಸುಖ ಸಿಗೋದು. ನೀನು ಹೀಗೆ ನಡ್ಕೋ" ಅಂತ ತಾಕೀತು ಮಾಡಿದ. ಕೊನೆಗೆ ತಾಯಿ ಮನೆ ಸಹಾಯದಿಂದ ಪೋಲೀಸತ್ರ ಕಂಪ್ಲೇಂಟು ಮಾಡಲಿಕ್ಕೆ ಹೋದ್ಲು. ಇವಳು ಪೋಲೀಸರತ್ರ ನಿಜ ಹೇಳಬೇಕಾಗಿ ಬಂದಾಗ ಶುರು ಆಯ್ತು ಮತ್ತೊಂದು ತರದ ಅತ್ಯಾಚಾರ!

ಆ SIಗೆ ಇದೆಲ್ಲ ಕೇಳಿದ್ರೆ ಒಂಥರಾ ಕಿಕ್ಕು, ಮಜ. "ಹೇಗಮ್ಮಾ ಮಾಡ್ತಿದ್ದ, ಬಟ್ಟೆ ಎಲ್ಲ ಬಿಚ್ಚಿ ಮಾಡ್ತಾ ಇದ್ನಾ? ನಿಂತ್ಕೊಂಡು ಮಾಡ್ತಾ ಇದ್ನಾ? ಹಾಗೇ ಕೂಡ್ಸಿ ಮಾಡ್ತ ಇದ್ನ?" ಇದಕ್ಕೆಲ್ಲ ಉತ್ತರ ಹೇಳಲಾರೆ. ಅದೂ ಬೇಡ ಅಂತ ವಾಪಸ್ಸು ಬಂದ್ಲು. ಇಷ್ಟರಲ್ಲಿ ಗಂಡನ ಕಡೆಯವರು ನೆಂಟರಿಷ್ಟರನ್ನೆಲ್ಲಾ ಕರ್ಸಿ ಒಂದು ಅಗ್ರಿಮೆಂಟ್ ಮಾಡಿಸಿದ್ರು, "ನಾನು ನನ್ನ ಗಂಡನಿಗೆ ಲೈಂಗಿಕ ಸುಖ ಕೊಡಲಿಕ್ಕೆ ಸಾಧ್ಯವಾಗದೇ ಇರೋದ್ರಿಂದ ನನ್ನ ಗಂಡ ಯಾರನ್ನ ಬೇಕಾದ್ರು ಮದುವೆಯಾಗಲಿಕ್ಕೆ ನನ್ನ ಅಡ್ಡಿ ಇಲ್ಲ, ಯಾವ ರೀತಿಲೂ ಅವರ ಬದುಕಲ್ಲಿ ನಾನು ತಲೆ ಹಾಕಲ್ಲ. ಅವರ ಆಸ್ತಿಗೂ ನನಗೂ ಸಂಬಂಧ ಇಲ್ಲ", ಅಂತ ಅವಳತ್ತಿರ ಬಲವಂತವಾಗಿ ಸಹಿ ಮಾಡಿಸ್ಕೊಂಡ್ರು, ತಾಳಿ ಕೀಳಿಸಿ, ಕಾಲುಂಗರ ತಗಿಸಿ ಕಳಿಸಿದ್ರು. ಅವಳು ಆಗಲೂ ತುಂಬಾ ಕೇಳಿಕೊಂಡ್ಲು. "ನನಗೆ 15 ದಿವಸ ಸಮಯ ಕೊಡಿ. ನಾನು ಸ್ವಲ್ಪ ಚೇತರಿಸ್ಕೋತೀನಿ. ಒಗ್ಗಿಕೊಳ್ಳೋಕೆ ಪ್ರಯತ್ನ ಮಾಡ್ತೇನೆ, ನನಗೆ ಗಂಡ ಬೇಕು", "ನಿನಗೆ ಗಂಡ ಬೇಕಾದ್ರೆ ಈಗ ಬಾ, ಬೇಡದಿದ್ರೆ ಸಹಿ ಮಾಡು" ಅಂತ ಮನೆ ಮಂದಿ ಎಲ್ಲ, ಅಷ್ಟೇ ಯಾಕೆ, ಸಮಾಜ ಎಲ್ಲ ಅವಳ ತಲೆ ಮೇಲೆ ಕೂತು ಸಹಿ ಮಾಡಿಸಿಕೊಂಡ್ರು. ಇಷ್ಟಕ್ಕೇ ಮುಗೀಲಿಲ್ಲ, ಮಾರನೇ ದಿನಾನೇ ತಾಯಿ ಮನೇಲಿದ್ದ ಅವಳಿಗೆ ಗಂಡ ಒಂದು ಆಕ್ರಮಣ ಮಾಡಿ ಮೂರು ಸಲ ಚಾಕುವಿನಲ್ಲಿ ಇರಿದ. ತನಗೆ ಸುಖ ಕೊಡದಿದ್ದ ಮೇಲೆ ಇವಳು ಸುಖವಾಗಿರಬಾರ್ದು. ಇವಳು ಹಾಳಾಗಬೇಕು ಇಲ್ಲ ಸಾಯಬೇಕು. ಇದು ಅವನ ಹಠ. ಇವಳು ಇನ್ನೂ ಚೇತರಿಸಿಕೊಳ್ತಾನೇ ಇದ್ದಾಳೆ. ಅವನು 28 ದಿವಸ ಜೈಲಲಿದ್ದು ಬಂದು ಚೆನ್ನಾಗೇ ಇದಾನೆ.

* * *

ಇದೆಲ್ಲವನ್ನು ಹಂಚಿಕೊಂಡವರು ಇಂತಹ ಅಸಂಖ್ಯಾತ ಹೆಂಗಸರ ಜತೆ ಕೆಲಸ ಮಾಡುವ 'ವಿಮೋಚನೆ' ಮಹಿಳಾ ಜಾಗೃತಿ ವೇದಿಕೆಯ ಕಾರ್ಯಕರ್ತೆಯರಾದ ಶ್ರೀಮತಿ ಶಾಂತಮ್ಮ ಮತ್ತು ನೊಂದ ಮಹಿಳೆಯರಾದ ಸಾವಿತ್ರಿ ಮತ್ತು ಮಂಜುಳಾ ಇವರುಗಳು.

ನಾಲ್ಕು ಗೋಡೆಯ ಮಧ್ಯೆ ನಡೆಯುವ ಕೌಟುಂಬಿಕ ಕ್ರೌರ್ಯಕ್ಕೆ ಬೇರೆ ಬಗೆಯ ಕ್ರೌರ್ಯಗಳಿಗಿಂತ ವಿಭಿನ್ನ ಆಯಾಮವಿದೆ. ಇದನ್ನೂ ಯಾರೂ ಲೆಕ್ಕದಲ್ಲೇ ಇಟ್ಟಿಲ್ಲ ಎಂದ ಶಾಂತಮ್ಮ ಅವರು, ನಡುರಸ್ತೇಲಿ ಜಗಳವಾಗಿ ಯಾರೋ ಯಾರನ್ನೋ ಹಿಡಿದು ಹಿಡಿದರೆ ಕೇಸಾಗುತ್ತೆ, ಪರಿಹಾರವೂ ಸಿಗುತ್ತೆ, ಆದರೆ ನಾಲ್ಕು ಗೋಡೆ ಮಧ್ಯೆ ಗಂಡ ಹೆಂಡತೀನ ಚೆನ್ನಾಗಿ ಹಿಡಿದು ಹೊಡೆದು ಆಸ್ಪತ್ರೆಗೆ ಹಾಕಿದ್ರೂ ಯಾರೂ ಕೇಳುವುದಿಲ್ಲ. ಅದನ್ನ ಸಂಸಾರದ ವಿಷಯ ಅಂದುಬಿಡುತ್ತಾರೆ, ಮುಚ್ಚಿಡಿ, ಬೀದಿಗೆ ತರಬೇಡಿ ಅಂತಾರೆ.

ಇತ್ತೀಚಿನ ವಿಭಕ್ತ ಕುಟುಂಬಗಳಲ್ಲಿ ಹೆಂಡತಿ ಕೆಲಸಕ್ಕೆ ಹೋಗುತ್ತಾಳೆ. ಕೆಲಸ ಮುಗಿಸ ತಕ್ಷಣ ಮನೆಗೆ ಬರಬೇಕು. ಮತ್ತೆ ತನ್ನ ಮಕ್ಕಳಿಗೆ ಟ್ಯೂಷನ್ ಹೇಳಬೇಕು, ರಾತ್ರಿಗೆ ಅಡಿಗೆ ಮಾಡಬೇಕು, ಬೆಳಿಗ್ಗೆ ಎದ್ದು ಗಂಡ-ಮಕ್ಕಳನ್ನ ಕಳಿಸಬೇಕು, ಇದು ಯಾವುದರಲ್ಲಾದ್ರೂ ಒಂದು ಕಡಿಮೆ ಆದ್ರೆ ಅವಳಿಗೆ ಬದುಕೋ ಹಕ್ಕಿಲ್ಲ. ಅವಳನ್ನ ಸುಲಭವಾಗಿ 'ಇಲ್ಲ' ಅನ್ನಿಸಿ ಇನ್ನೊಂದು ಮದುವೆ ಮಾಡಿಕೋಬಹುದು ಎಂದು ಹೇಳಿದ ಶಾಂತಮ್ಮ ಅವರು ಜಾಗತೀಕರಣದ ಕಾರಣದಿಂದಾಗಿ ಬರುತ್ತಿರುವ ಸರಕು ಸಂಸ್ಕೃತಿಗೆ ಬಲಿಯಾಗಿ ವರದಕ್ಷಿಣೆ ಸಂಬಂಧದ ಕ್ರೌರ್ಯ, ಲೈಂಗಿಕ ಕ್ರೌರ್ಯ ಹೆಚ್ಚುತ್ತಿದೆ ಎಂದು ಅಭಿಪ್ರಾಯ ಪಟ್ಟರು.

ಅದೇನೇಯಾದರೂ ಹತ್ತಿಪ್ಪತ್ತು ವರ್ಷಗಳ ಹಿಂದೆ ಇದ್ದುದ್ದಕ್ಕಿಂತಲೂ ಈಗ ಪರಿಸ್ಥಿತಿ ಕೊಂಚ ಬದಲಾಗಿರುವುದಾಗಿಯೂ ಹಿಂದೆ ಮಹಿಳಾ ಚಳುವಳಿ ಪ್ರಾರಂಭವಾದ ಕಾಲದಲ್ಲಿ ಕುಟುಂಬದಲ್ಲಿ ನಡೆಯುವ ಕ್ರೌರ್ಯವನ್ನು ಕುರಿತು ಮಾತೆತ್ತಲೂ ಹಿಂಜರಿಯುತ್ತಿದ್ದ ಹೆಂಗಸರು ಈಗ ಸ್ವಲ್ಪವಾದರೂ ಧೈರ್ಯವಾಗಿ ಹೊರಬಂದು ಅದರ ಬಗ್ಗೆ ಮಾತನಾಡುತ್ತಾರೆ. ಕ್ರೌರ್ಯವನ್ನು ವಿರೋಧಿಸಿ ವಿಚ್ಛೇದನ, ಪರಿಹಾರಗಳಿಗೆ ನೇರವಾಗಿ ಮೊರೆ ಹೋಗುತ್ತಿದ್ದಾರೆ ಎಂಬುದು ಇತ್ಯಾತ್ಮಕ ಅಂಶ ಎಂದು ಗುರುತಿಸಿದರು.

ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದ 'ಮಾನಿನಿ' ಮಹಿಳಾ ವೇದಿಕೆಯ ಹಿರಿಯ ಕಾರ್ಯಕರ್ತೆ ಮೀರಾ ಚಕ್ರವರ್ತಿಯವರು ಕೌಟುಂಬಿಕ ಕ್ರೌರ್ಯ ನಾಲ್ಕು ಗೋಡೆಯ ಮಧ್ಯದಿಂದ ಬಯಲಿಗೆ ಬರುತ್ತಾ "ವಯಕ್ತಿಕವೇ ರಾಜಕೀಯ" ಎಂಬ ಮಹಿಳಾ ಚಳುವಳಿಯ ತಾತ್ವಿಕ ನೆಲೆ ಹೆಚ್ಚೆಚ್ಚು ಕಾರ್ಯರೂಪೀಗೊಳ್ಳುತ್ತಿರುವುದನ್ನು ಕುರಿತು ಸಂತಸ ವ್ಯಕ್ತಪಡಿಸಿದರು. ಅದೇನೇಯಾದರೂ ಮಹಿಳಾ ಚಳುವಳಿ 'ಸಾಮಾಜಿಕ ಬಹಿಷ್ಕಾರ'ದ ಕಡೆಗೆ ಇನ್ನೂ ದೊಡ್ಡ ರೀತಿಯಲ್ಲಿ ಹೆಜ್ಜೆ ಹಾಕಿಲ್ಲದಿರುವುದರ ಬಗ್ಗೆ ವಿಷಾದಿಸಿದರು. ಪಿತೃ ಪ್ರಧಾನತೆಯೊಂದಿಗೆ ತಳುಕು ಹಾಕಿಕೊಂಡಿರುವ ಅಧಿಕಾರ ಸಂಬಂಧವೇ ಹೇಗೆ ಕೌಟುಂಬಿಕ ಕ್ರೌರ್ಯದ ತಳಹದಿ ಎಂಬುದನ್ನು ಅವರು ಎತ್ತಿ ತೋರಿಸಿದರು.

●

# ಮಾಧ್ಯಮಗಳು, ಸ್ತ್ರೀ ಮತ್ತು ಕ್ರೌರ್ಯ

- ಡಾ. ವಿಜಯಾ

ಮಾಧ್ಯಮಗಳಲ್ಲಿ ಮಹಿಳೆ ಮತ್ತು ಕ್ರೌರ್ಯ ಎಂಬ ವಿಷಯ ಚರ್ಚಿಸುವಾಗ ಅದಕ್ಕಿರುವ ಅನೇಕ ಮಗ್ಗುಲುಗಳನ್ನು ಗಮನಿಸಬೇಕಾಗುತ್ತದೆ. ಜನಪ್ರಿಯ ಮಾಧ್ಯಮಗಳಂತೂ ಲಾಭ ಗಳಿಕೆಯೇ ಪ್ರಧಾನ ಉದ್ದೇಶವಾಗಿಟ್ಟುಕೊಳ್ಳುವುದರಿಂದಾಗಿ ಬಹುಸಂಖ್ಯಾತರನ್ನು ಭಾವನಾತ್ಮಕ ನೆಲೆಯಲ್ಲಿ ಮತ್ತು ಆಳದಲ್ಲಿರಬಹುದಾದ ಅನೇಕ 'ಅತೃಪ್ತಿ'ಗಳನ್ನು ತಣಿಸುವ ದಿಕ್ಕಿನಲ್ಲಿ ಗಲ್ಲಾಪೆಟ್ಟಿಗೆ ತುಂಬಿಸುವುದರಲ್ಲೇ ತೊಡಗಿರುತ್ತವೆ. ದೋಷವೆಲ್ಲ ನೋಡುಗರದ್ದು ಎಂದು ಜಾರಿಕೊಳ್ಳುತ್ತವೆ. ಈ ಹಿನ್ನೆಲೆಯಲ್ಲಿ ಸಿನಿಮಾ, ನಾಟಕ, ದೂರದರ್ಶನ ಹಾಗೂ ಪತ್ರಿಕೆಗಳನ್ನು ಅವಲೋಕಿಸಿದಾಗ ಈ ಮಾಧ್ಯಮಗಳಲ್ಲಿಯ ವಸ್ತು-ನಿರೂಪಣೆಯಲ್ಲಿ ಸ್ತ್ರೀ ಹೇಗೆ ಚಿತ್ರಿಸಲ್ಪಡುತ್ತಿದ್ದಾಳೆ ಎಂಬುದು ಮುಖ್ಯವಾಗುತ್ತದೆ. ಎರಡನೆಯದಾಗಿ ಈ ಮಾಧ್ಯಮಗಳಲ್ಲಿ ಸ್ತ್ರೀ ಹೇಗೆ ತೊಡಗಿಕೊಂಡಿದ್ದಾಳೆ, ಅವಳ ಕಾರ್ಯಕ್ಷೇತ್ರದಲ್ಲಿ ಅವಳು ಎಂತೆಂತಹ ಬವಣೆಗಳಿಗೆ ಗುರಿಯಾಗುತ್ತಾಳೆ ಎಂಬುದು ಗಮನಾರ್ಹ. ನಾಟಕ-ಸಿನಿಮಾ ಮಾಧ್ಯಮಗಳಲ್ಲಿಯ ಸ್ತ್ರೀಯರು ಸೆಲಿಬ್ರಿಟಿಗಳೂ ಆಗುವುದರಿಂದ, ಮತ್ತು ಇನ್ನಿತರ ಕಾರಣಗಳಿಗಾಗಿ ಸಮಾಜ-ಕೌಟುಂಬಿಕ ವಲಯಗಳಲ್ಲಿ ಹಾಗೂ ಪತ್ರಿಕಾ ಮಾಧ್ಯಮಗಳಲ್ಲಿ ಸ್ತ್ರೀಯರನ್ನು ವಿಭಿನ್ನವಾಗಿ ಗುರುತಿಸಿಕೊಳ್ಳಲಾಗಿದೆ. ಇವೆಲ್ಲದರ ನಡುವೆ ವೈಯಕ್ತಿಕವಾದ್ದೆಲ್ಲ ಕಳೆದು ಹೋಗುತ್ತವೆ. ಬಹುತೇಕ ಒಂದು 'ಒಪ್ಪಿತ' ಎಂದುಕೊಂಡ ವ್ಯವಸ್ಥೆಯು ಒಳಗೇ ಸೇರಿ ಹೋಗಿ ಅದೇ ಮೌಲ್ಯಗಳನ್ನು ಪ್ರತಿಪಾದಿಸಲು ನೆರವಾಗುವವರೇ ಅಧಿಕ. ತನ್ನ ಸ್ಥಿತಿ-ಸಂದರ್ಭ, ತನ್ನರಿವಿಗೆ ಬರುವ ಮೊದಲೇ ಆ ವ್ಯವಸ್ಥೆಯಲ್ಲಿ ಸ್ತ್ರೀ ಶೋಷಿತಳೂ, ಹಿಂಸೆಯನ್ನು 'ಸುಖ'ವೆಂದು ಸ್ವೀಕರಿಸುವವಳೂ ಆಗಿರುತ್ತಾಳೆ.

'ವಸ್ತು-ನಿರೂಪಣೆ'ಯ ದೃಷ್ಟಿಯಿಂದ ಸಿನಿಮಾ-ನಾಟಕದಂಥ ಮಾಧ್ಯಮಗಳಲ್ಲಿ ಸ್ತ್ರೀ ಬಹುತೇಕ ಒಂದು ಗೊತ್ತಾದ ಪುರುಷ ಪ್ರಧಾನ ಸಮಾಜವು ಅಪೇಕ್ಷಿಸುವ ಸ್ತ್ರೀ 'ಮಾದರಿ'ಯಾಗಿ ಚಿತ್ರಿತಗೊಳ್ಳುತ್ತಾಳೆ.

ಸೀತೆ-ಸಾವಿತ್ರಿಯರ ಮಾದರಿಗಳನ್ನೇ ಅತ್ತಿತ್ತ ಸರಿಸಿ ಒಂದಿಲ್ಲೊಂದು ಹೊಸ ನಿರೂಪಣಾ ವಿಧಾನದಲ್ಲಿ ಅದೇ ಮೌಲ್ಯವನ್ನೇ ಒಪ್ಪಿಸಲಾಗುತ್ತಿದೆ. ಈ ಎಲ್ಲ ಹಂತದಲ್ಲೂ ಸ್ತ್ರೀ ತ್ಯಾಗ, ಬಲಿದಾನಗಳಿಗೆ ಆದರ್ಶವಾಗುತ್ತಾಳೆ. ಪುರುಷನಿಗೆ ಅಧೀನಳಾಗಿರುವುದೇ ಅಂತಿಮ ತೀರ್ಮಾನ. ಹಾಗಲ್ಲದ ಯಾವುದೇ ಬದಲಾವಣೆ ಸ್ತ್ರೀ ಪಾತ್ರದಲ್ಲಿ ಬಂದರೂ, ಅದು ಆಕೆಯನ್ನು 'ಪಳಗಿಸು'ವ ಮೂಲಕ ಮತ್ತು ಆಕೆಯ ಪ್ರಾಣ ತ್ಯಾಗದ ಮೂಲಕ ಮತ್ತೆ ಅದೇ ಮೌಲ್ಯಗಳ ದಿಕ್ಕಿಗೇ ತಿರುಗಿಸಲಾಗುತ್ತದೆ.

ವೃತ್ತಿ ರಂಗಭೂಮಿಯ ನಾಟಕಗಳ ರಚನೆಯಲ್ಲಿ ಜನಪ್ರಿಯ ಚಿತ್ರಗಳ ಕಥಾವಸ್ತು ನಿರೂಪಣೆಯಲ್ಲಿ ಇವು ಪ್ರಧಾನವಾಗಿ ಎದ್ದು ಕಾಣುವ ಅಂಶಗಳು. ಹವ್ಯಾಸಿ ರಂಗಭೂಮಿಯಲ್ಲಿ ಕೆಲವೊಮ್ಮೆ ಹೊಸ ಚಿಂತನೆಗಳು ಕಂಡಿವೆ. ಸ್ತ್ರೀಯರ ಒಳತೋಟಿ, ಬಿಡುಗಡೆಯಂಥ ಅಂಶಗಳಿಗೆ ಆಗೀಗ ಒತ್ತು ಸಿಕ್ಕಿದೆ. ಅದೇ ರೀತಿಯಲ್ಲಿ ಚಲನಚಿತ್ರರಂಗದ ಕೆಲವು ಗಂಭೀರವಾಗಿ ಯೋಚಿಸಬಲ್ಲ ನಿರ್ದೇಶಕರು ಗಂಡು-ಹೆಣ್ಣುಗಳನ್ನೇ ಸಮಾನವಾಗಿಯೇ ಗುರುತಿಸಿರುವುದುಂಟು. (ಈ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆಯನ್ನು ವೈಶಾಲಿ, ಗಿರಿಜಾ ನಿರ್ವಹಿಸಿದ್ದಾರೆ).

*ಮಾನಸ ಹಮ್ಮಿಕೊಂಡಿದ್ದ ಎರಡನೇ ವಿಚಾರ ಸಂಕಿರಣದಲ್ಲಿ, ಬೆಳ್ಳಿ ತೆರೆಯ ಮೇಲಿನ, ರಂಗಭೂಮಿಯ ಮೇಲಿನ ಭ್ರಮಾತ್ಮಕ ಲೋಕದಲ್ಲಷ್ಟೇ ಜನರೊಂದಿಗೆ ಸಂಪರ್ಕ ಹೊಂದಿರುತ್ತಿದ್ದ ಕಲಾವಿದೆಯರು ಮುಕ್ತವಾಗಿ ತಮ್ಮ ಒಳತೋಟಿಗಳನ್ನು ಹಂಚಿಕೊಂಡಿದ್ದು ಒಂದು ಅತ್ಯಂತ ಭಿನ್ನವಾದ ಅನುಭವವೇ ಆಗಿತ್ತು. ತಮ್ಮ ಮೇಲೆ ನಡೆಯುತ್ತಿರುವ ಕ್ರೌರ್ಯವನ್ನು ತಮ್ಮ ಮುಗ್ಧತೆಯಿಂದಾಗಿಯೇ ಗುರುತಿಸಲು, ಪ್ರತಿಭಟಿಸಲು ಸಾಧ್ಯವಾಗದೆ ಹೋಗಿರುವುದನ್ನು ಇವರುಗಳು ಹಂಚಿಕೊಂಡ ರೀತಿ ಅತ್ಯಂತ ಮಾರ್ಮಿಕವಾಗಿತ್ತು. ಇದನ್ನು ಗುರುತಿಸಲು ಸಾಧ್ಯವಾಗಿರುವ ವೈಶಾಲಿಯವರು ತಮ್ಮದೇ ರೀತಿಯಲ್ಲಿ ಪ್ರತಿಭಟನೆ ತೋರುತ್ತಿರುವುದು ಕೂಡ ಸ್ಪಷ್ಟವಾಗಿ ಮೂಡಿಬಂದಿತು. ಹಿರಿಯ ಪತ್ರಕರ್ತೆ ಡಾ. ವಿಜಯಾರವರು ರಂಗಭೂಮಿ, ಚಲನಚಿತ್ರ ಹಾಗೂ ಪತ್ರಿಕೋದ್ಯಮದಲ್ಲಿ ಮಹಿಳೆ - ಕ್ರೌರ್ಯ ಕುರಿತು ತಾತ್ವಿಕವಾಗಿ ಒಟ್ಟಾರೆಯಾದ ಚಿತ್ರಣವನ್ನು ನೀಡಿದರು.*

ಸಾಮಾಜಿಕ ವಿಷಯಗಳಿಗೆ ಬಂದರೆ ಈ ಕ್ಷೇತ್ರದಲ್ಲಿ ಕೆಲಸ ನಿರ್ವಹಿಸುವ ಸ್ತ್ರೀಯರ ಬಗ್ಗೆ ಕುತೂಹಲ ಇರಬಹುದಾಗಲೀ, ಗೌರವ ಇರುವುದು ಕಡಿಮೆ. ಕಾಲದಿಂದ ಹೀಗೆ ನಡೆದು ಬಂದಿದೆ. ಆರಂಭದಲ್ಲಿ ರಂಗಭೂಮಿಗೆ ನಟಿಯರೇ ಇಲ್ಲ. ಪುರುಷರೇ ಸ್ತ್ರೀ ವೇಷ ಧರಿಸುತ್ತಿದ್ದರು. ಕ್ರಮೇಣ ಸ್ತ್ರೀಯರ ಪ್ರವೇಶ ಆಯಿತು. ಆರಂಭದಲ್ಲಿ ಹಾಗೆ ಬಂದವರು ಬಹುತೇಕ ದೇವದಾಸಿಯರು, ದಾನಿಯರು ಎಂದು ಕರೆದುಕೊಂಡ ಮಹಿಳೆಯರು. ಸಾಮಾಜಿಕವಾಗಿ ಇವರ ಸ್ಥಾನವೆ ಬೇರೆ ಯಾದ್ದರಿಂದ 'ಗೌರವಾನ್ವಿತ'ರಾಗುವುದು ಸಾಧ್ಯವಿಲ್ಲವಾಗಿತ್ತು. ಅನಂತರ ಇತರರೂ ಬಂದರಾದರೂ ಬಹುತೇಕ ಸಾಮಾಜಿಕದಲ್ಲಿ ಸಿನಿಮಾ-ನಾಟಕಗಳಲ್ಲಿ ತೊಡಗಿರುವ ಸ್ತ್ರೀಯರ ಬಗ್ಗೆ ಒಂದು ಬಗೆಯ ದೂರತ್ವವೇ ಇತ್ತು. ಈಚೆಗೆ ಈ ಸ್ಥಿತಿ ಕೊಂಚ ಬದಲಾಗುವ ಸೂಚನೆಗಳಿವೆ.

ವೃತ್ತಿರಂಗಭೂಮಿಯಲ್ಲಿ ಹಲವು ವಿಧಗಳಿವೆ. ಕಂಪನಿಗಳನ್ನು ನಡೆಸುವವರಾದರೆ ಸಂಬಳ-ವಸತಿ ಇತ್ಯಾದಿಗಳ ಅನುಕೂಲ ಇರುತ್ತದೆ. ಕಂಪನಿಯ ಜೊತೆಗೇ ಇರುತ್ತಾರೆ. ಆದರೆ, ಕೆಲವು ಹವ್ಯಾಸೀ ವೃತ್ತಿ ನಟರಿದ್ದಾರೆ. ಹಳ್ಳಿಗಳಲ್ಲಿ ವಿಶೇಷ ಸಂದರ್ಭಗಳಿಗಾಗಿ ನಾಟಕ 'ಆಡಿಸುವ' ಯಜಮಾನರು, ಅಲ್ಲಿಯ ಜನರಿಗೆ ನಾಟಕ ಕಲಿಸುವ ಮೇಷ್ಟ್ರನ್ನು ಕರೆಸಿ ನಾಟಕ ಕಲಿಸುತ್ತಾರೆ. ಇಂಥಲ್ಲಿ ನಾಯಕಿಯ ಪಾತ್ರಕ್ಕೆ ಬರುವ ಕಲಾವಿದೆಯರಿರುತ್ತಾರೆ. ಒಂದು ಪ್ರದರ್ಶನಕ್ಕೆ ಇಂತಿಷ್ಟೆಂದು ಸಂಭಾವನೆ ಇರುತ್ತದೆ. ರಾತ್ರಿಯಿಡೀ ನಾಟಕ ಮಾಡುತ್ತಾರೆ. ಅರ್ಥ-ಸಂಬಂಧ ಏನನ್ನೂ ಪರಿಗಣಿಸದೆ 'ಕುಣಿಯುತ್ತಲೇ' ಇರುವುದು ಪದ್ಧತಿ. ಈಚೆಗೆ ಆಧುನಿಕ ಸಂಗೀತದ ಕೆಸೆಟ್‌ಗಳನ್ನು ಹಾಕಿ ಕುಣಿಯುವುದೂ ಪ್ರಾರಂಭವಾಗಿದೆ. ಇಂಥ ಕಡೆಗೆ. ಬರುವ ಕಲಾವಿದೆಗೆ ಸಾಮಾನ್ಯವಾಗಿ ಆಡುವ ಸಾಮಾಜಿಕ, ಪೌರಾಣಿಕ ನಾಟಕಗಳು ಸಾಲುಗಳ ಪರಿಚಯ ಇರುತ್ತದೆ. ಇಂಥಲ್ಲಿ ಅನೇಕ ನಟಿಯರಿಗೆ ನಾಟಕ ಕೊಡಿಸಿದ ಶ್ರೀಮಂತ ಯಜಮಾನನ ಕಿರುಕುಳವೋ, ಕೆಲವೊಮ್ಮೆ ಹಳ್ಳಿಯಲ್ಲೇ ಇರಬಹುದಾದ ವಿರೋಧಿ ಗುಂಪಿನವರ ಕಿತಾಪತಿಗಳೇ ಕಾರಣವಾಗಿ ವಿಚಿತ್ರ ಹಿಂಸೆಗೆ ಒಳಗಾಗುತ್ತಾರೆ. ನಟಿಯನ್ನೇ ಕಿಡ್ನಾಪ್ ಮಾಡುವವರೂ ಉಂಟು! ಇನ್ನು ಅಂಥಲ್ಲಿ ನಾಟಕ ನೋಡಲು ಬರುವ ಪ್ರೇಕ್ಷಕರೆಲ್ಲರೂ ಸದಭಿರುಚಿ ಯವರಾಗಿರುವುದಿಲ್ಲ. ಕೀಳುದರ್ಜೆಯ ಸಿನಿಮಾಗಳನ್ನು ಪ್ರೀತಿಸುವ ಅವರುಗಳು ಅಲ್ಲಿಯದಕ್ಕೆ ಉದ್ರೇಕಿಸುವಂಥ ಭಾವ-ಭಂಗಿ, ಸಂಭಾಷಣೆಗಳಿಗಾಗಿ ಒತ್ತಾಯಿಸುತ್ತಾರೆ.

ಇವೆಲ್ಲವನ್ನೂ ನಿಭಾಯಿಸಿದರೂ ಆಕೆಗೆ ಒಮ್ಮೊಮ್ಮೆ ನಿಗದಿಯಾದಂತೆ ಸಂಭಾವನೆ ಕೊಡದೆ, ಅವಳ ಸ್ಥಳಕ್ಕೆ ಸಲೀಸಾಗಿ ಹಿಂತಿರುಗಲು ಆಗದ ಹಾಗೆ ತಡೆ ಹಾಕಿ ಹೀಗೇ ಅನೇಕ ತೊಂದರೆಗಳು, ವಿಚಿತ್ರ ಪರಪೀಡಿತರ ಕೈಯಲ್ಲಿ ನಲುಗುವ ಸ್ಥಿತಿ ಇರುತ್ತದೆ. ಇನ್ನು ಕಂಪನಿ ನಾಟಕಗಳಲ್ಲಿ ಆ ಸ್ತ್ರೀ ಪಾತ್ರಗಳೇ ಜನಾಕರ್ಷಣೆಯ ಕೇಂದ್ರಗಳು. ಅವರನ್ನು ಹೆಚ್ಚಿನ ಸಂಭಾವನೆ ಇತ್ಯಾದಿಗಳ ಆಕರ್ಷಣೆಯೊಡ್ಡಿ ಮತ್ತೊಂದು ಕಂಪನಿ ಹಾರಿಸಿ ಕೊಂಡು ಹೋಗಬಹುದು. ಅಥವಾ ಆಕೆಯೇ ವಿವಾಹವಾಗಿ ಹೊರ ಹೋಗಬಹುದು. ಇಂಥ ಎಲ್ಲ ಸಮಸ್ಯೆಗಳಿಗೆ ಪರಿಹಾರವಾಗಿ ಕಂಪನಿಯ ಮಾಲೀಕ ಕಂಡುಕೊಂಡ ದಾರಿ ಆಕೆಯನ್ನು ವಿವಾಹವಾಗಿ ಬಿಡುವುದು. ನಮ್ಮ ಅನೇಕ ಶ್ರೇಷ್ಠ ಅಭಿನೇತ್ರಿಯರು ಇದಕ್ಕೆ ಉದಾಹರಣೆಯಾಗುತ್ತಾರೆ. ಪ್ರತಿಯೊಬ್ಬ ಕಂಪೆನಿ ಮಾಲೀಕನೂ ಮೂರು ನಾಲ್ಕು ಹೆಂಡತಿಯರನ್ನು ಪಡೆದವನಾಗಿದ್ದಾನೆ. ಸ್ತ್ರೀ ಸಹ ಅನಿಶ್ಚಯತೆಗಿಂತ ಶ್ರೀಮಂತ ಮಾಲೀಕನ ಹೆಂಡತಿಯಾಗಿ ಸುರಕ್ಷಿತೆ ಅಂದುಕೊಳ್ಳುವುದೂ ಉಂಟು. ಸಹ ಕಲಾವಿದರನ್ನೇ ಮದುವೆಯಾದವರೂ ಉಂಟು. ಇವರಲ್ಲಿ ಬಹುತೇಕ ಕಲಾವಿದೆಯರು ಅವರ ಕೊನೆಗಾಲದಲ್ಲಿ ನಿರ್ಗತಿಕರಾಗಿ ಅನಾಥರಾಗಿ ಬಹು ಕಷ್ಟದಲ್ಲಿ ದಿನ ಕಳೆದ ಅನೇಕ ದುರಂತ ಕಥೆಗಳು ನಮ್ಮೆದುರಿಗೇ ಇವೆ.

ಕಂಪನಿ ನಾಟಕಗಳಿಗೆ ಬರುವ 'ದೊಡ್ಡ' ಜನರನೇಕರಿಗೆ ಅವರ ಒಡವೆಗಳನ್ನು ನಟಿ ಧರಿಸಲಿ ಎಂಬ ಆಸೆ. ಸೀರೆ, ಉಂಗುರ ಇತ್ಯಾದಿ ಉಡುಗೊರೆ ಕೊಡುತ್ತಾರೆ. ನಟಿಯೊಂದಿಗೆ ಪ್ರಣಯ ಬಯಸುತ್ತಾರೆ. ಕೆಲವರಿಗೆ ನಟಿ ಅಲಂಕೃತಳಾಗಿ ಅವರ ತೊಡೆಯ ಮೇಲೆ ಕೊಂಚ ಕಾಲ ಕೂತು ಸಂತೋಷಪಡಿಸಿದರೂ ಸಾಕು. (ಇದು ಸ್ತ್ರೀ ವೇಷದಲ್ಲಿದ್ದ ಸುಂದರ ಪುರುಷರಿಗೂ ಆಗುತ್ತಿದ್ದ ಅನುಭವ). ಅತಿ ದೀರ್ಘಕಾಲ ಹೆಂಡತಿಯನ್ನು ಬಿಟ್ಟು ಬಂದು ಹಪ ಹಪಿಸುವ ಕಲಾವಿದರನ್ನು ಈಕೆ ತಣಿಸಬಾರದೇಕೆ ಎಂಬ ನಿಲುವೂ ಉಂಟು. (ಯುದ್ಧಕ್ಕೆ ಹೋದ ಸೈನಿಕರಿಗೆ ಹಿಂದೆ ಇಂಥ ಸುಖ ಒದಗಿಸುತ್ತಿದ್ದರಂತೆ). ಇವೆಲ್ಲದರ ನಡುವೆ ಯಾವುದೇ ಕಾರಣಕ್ಕೂ ಗರ್ಭಿಣಿಯಾಗಿ ಅಪಾಯ ತಂದುಕೊಳ್ಳಬಾರದು. ದೇಹ ಸೌಂದರ್ಯ ಕೆಡಬಾರದು ಇತ್ಯಾದಿ ಆಕೆಯ ಮೇಲೆ ಇರುವ ನಿರ್ಬಂಧಗಳು ಸಣ್ಣವೇನಲ್ಲ. "ಹಗಲು ನಾಟಕವಿಲ್ಲವಲ್ಲ ಅಂತ ಪೇಟೆ ಬೀದಿ ಸುತ್ತಲೂ ಬಿಡುವುದಿಲ್ಲ. ನಟಿಯರು ರಂಗದ ಮೇಲೆ ಪ್ರತ್ಯಕ್ಷವಾಗಿ ಥ್ರಿಲ್ ಕೊಡಬೇಕಾಗಿರುವುದರಿಂದ ಸಾಮಾನ್ಯರಂತೆ ಎಲ್ಲರೆದುರು ಕಾಣಿಸಿಕೊಂಡರೆ ರಂಗಮಂದಿರಕ್ಕೆ ಟಿಕೇಟು ಕೊಂಡು ಪ್ರೇಕ್ಷಕ ಬರಲಾರ ಎಂಬುದು ಮಾಲೀಕರ ನಿಲುವು" ಎಂತ ಕಲಾವಿದೆಯೊಬ್ಬರು ಹೇಳಿದ್ದು ನೆನಪಿದೆ. ಹವ್ಯಾಸಿ ರಂಗ ಭೂಮಿಯಲ್ಲಿ ಈ ಪ್ರಮಾಣದಲ್ಲಿ ಅಲ್ಲವಾದರೂ ಒಳಗೊಳಗೇ ನಡೆಯುವ ಕೆಲವು ಕಿರುಕುಳಗಳನ್ನು ತಳ್ಳಿ ಹಾಕುವಂತಿಲ್ಲ.

ಬಹುತೇಕ ವಿದ್ಯಾವಂತೆಯರು ಇಲ್ಲಿ ಪ್ರವೇಶಿಸುವುದರಿಂದಾಗಿ 'ತಪ್ಪು' (?)ಗಳಿಗೆ ಆಕೆಯೂ ಹೊಣೆಗಾರರಾಗಿರುತ್ತಾಳೆ ಎಂದುಕೊಳ್ಳಬಹುದೇನೋ. ಸ್ತ್ರೀ ಕೊಂಚ ಭಾವನಾ ಜೀವಿ ಆದ್ದರಿಂದ ಆಕೆಗೆ ಈ ರಂಗದಲ್ಲಿ ಇಂಟಲೆಕ್ಚುಯಲ್ ಬ್ಲ್ಯಾಕ್ ಮೇಲಿಂಗ್ ಆಗುವುದು ಅಧಿಕ ಎನ್ನಬಹುದೇನೊ.

ಇನ್ನು ಚಿತ್ರರಂಗದಲ್ಲಿಯ ಹಿಂಸೆ ವಿಚಿತ್ರ ರೀತಿಯದು. ಸ್ತ್ರೀಯರು ಬರಲು ಅಂಜುತ್ತಾರೆ. ಕೆಲವರು ವಿಚಿತ್ರ ಸಂದರ್ಭಗಳಲ್ಲಿ ವಿಧಿಯಿಲ್ಲದೆ ಬರುತ್ತಾರೆ. ಇಲ್ಲಿಯೂ ಕಲಾವಿದೆಯರನ್ನು ಶ್ರೇಣೀಕೃತಗೊಳಿಸಲಾಗಿದೆ. ಹಲವು ಹಂತಗಳಲ್ಲಿ ಅವರಿವರಿಂದ ವಂಚಿತರಾಗಿ ಕಡೆಗೂ ಈ ರಂಗಕ್ಕೆ ಬಂದು ಬೀಳುವ ಹುಡುಗಿಯರನ್ನು ಅತ್ಯಂತ ಹೀನವಾಗಿ ದುಡಿಸಿಕೊಳ್ಳಲಾಗುತ್ತಿದೆ. ಜ್ಯೂನಿಯರ್ ಕಲಾವಿದೆಯರ ಸ್ಥಿತಿಯಂತೂ ಅತ್ಯಂತ ಹೀನವಾಗಿದೆ.

ಮೇಕಪ್ ಮಾಡುವವನ ಮತ್ತು ವಸ್ತ್ರಗಳನ್ನು ಸಿದ್ಧಪಡಿಸುವ ಟೈಲರ್‌ಗಳು ಅಳತೆ ತೆಗೆದುಕೊಳ್ಳುವ ರೀತಿಯಿಂದಲೇ ವಿಚಿತ್ರ ಹಿಂಸೆಗಳು ಪ್ರಾರಂಭವಾಗುತ್ತವೆ. ಕಮಕ್ ಕಿಮಕ್ ಎನ್ನದೆ ಸಹಿಸಬೇಕು. ಎದುರಿಸಿ ನಿಂತರೆ ಅವರೆಲ್ಲ ಆಸಕ್ತಿ ತೆಗೆದು ಕೊಳ್ಳುವುದಿಲ್ಲ. ಆಕೆಯ ಮೇಕಪ್ ಕೆಡುತ್ತದೆ. ವಸ್ತ್ರ ವಿನ್ಯಾಸ (ಅಗತ್ಯ ಭಾಗಗಳಿಗೆ ಸರಿಯಾಗಿ ಪ್ಯಾಡಿಂಗ್ ಮಾಡುವ, ಉಡುಪು ಹೊಂದಿಸುವ ರೀತಿ) ಎಲ್ಲವೂ ಕೆಡುತ್ತದೆ. ಅದೇ ಆಕೆಯನ್ನು 'ನಪಾಸು'ಗೊಳಿಸಬಹುದು. ಅಲ್ಲಿಂದ ಮುಂದೆ ಛಾಯಾಗ್ರಾಹಕ, ಲೈಟ್ ಬಾಯ್ ಮೊದಲ್ಗೊಂಡು ಎಲ್ಲರನ್ನೂ ವಿಶ್ವಾಸದಿಂದ ನಡೆಸಿಕೊಳ್ಳುವ ಒಪ್ಪಂದಗಳಿರುತ್ತವೆ. ಕಡೆಗೆ ಊಟ-ತಿಂಡಿ, ನೀರು ಕೊಡುವ ಹುಡುಗರು ಕೂಡ ಹೊಂದಿಕೊಳ್ಳದಿದ್ದರೆ ಆಹಾರದಲ್ಲಿ ಭೇಧಿ ಮಾತ್ರೆ ಕೊಡುವ ಅಥವಾ ಸಾರಿಗೆ ನೀರು ಬೆರೆಸಿ, ಎಳನೀರು-ಮಜ್ಜಿಗೆಯಲ್ಲೂ ನೀರು ಸೇರಿಸಿ ಏನೊ ಮಾಡಿಯಾರು - ವಿಚಿತ್ರವಾದ ಹೇಳಲೂ ಅನುಭವಿಸಲೂ ಸಾಧ್ಯವಾಗದಂಥ ರ್‍ಯಾಗಿಂಗ್ ಇದು. ಇಲ್ಲಿಂದಾಚೆಗೆ ನಿರ್ದೇಶಕರು, ನಿರ್ಮಾಪಕರು- ಇವರನ್ನು ಮೀರಿಸಿದ ಫೈನಾನ್ಸಿಯರ್ಸ್. ಎಲ್ಲರ ನೋಟದ ಖುಷಿಗಳಿಗೆ ಬೇಕಾದ ಹಾಗೆ ಇದ್ದೂ ಪ್ರತಿನಿತ್ಯ ಕೆಲಸ ಸಿಗುವುದು ಕಷ್ಟವಾಗಿರುತ್ತದೆ.

ಅಪಘಾತದಂಥ ದೃಶ್ಯವಾದರೆ ದಿನವಿಡೀ ರಕ್ತದ ಬಣ್ಣದ ನೀರು (ಟೊಮ್ಯಾಟೋ ಕಚಪ್) ಅನ್ನು ಸುರಿಸಿಕೊಂಡು ಅಸ್ತವ್ಯಸ್ತಗೊಂಡ ಉಡುಪಿನಲ್ಲಿ ಗಂಟೆಗಟ್ಟಲೆ ಲಾರಿ, ಬಸ್ಸುಗಳ ಕೆಳಗೆ ಬಿದ್ದಿರಬೇಕು. ಬಸಿರಿಯರಿಗೆ ಹೊಡೆಯುವ, ಹಲವರು ರೇಪ್ ಮಾಡಲು ಬರುವ, ಖಳರೆಲ್ಲ ಸೇರಿ ನಾಯಕನ ಎದುರಿಗೇ ನಾಯಕಿಯನ್ನು ಹಿಂಸಿಸುವ ವಿವಿಧ ಬಗೆ ಹೀಗೆ ಹೇಳುತ್ತಾ ಹೋದರೆ ಮುಗಿಯದಷ್ಟು ದೀರ್ಘ ವಿಷಯಗಳಿವು.

ಸಂಭಾವನೆ ಕೂಡ ಪೂರ್ತಿ ಕೈಗೆ ಸಿಗದೆ ಮಧ್ಯವರ್ತಿಗಳಿಗೆ ಸಿಂಹಪಾಲು ಹೋಗುತ್ತವೆ. ಈ ನಾಯಕಿಯರಿಗೆ ಧ್ವನಿ ಕೊಡುವವರೇ ಬೇರೆ. ಈ ಕಂಠದಾನ ಕಲಾವಿದೆಯರ ಸ್ಥಿತಿ ಮತ್ತೂ ಶೋಚನೀಯ. ಅವರ ವೈಯಕ್ತಿಕ ವೃತ್ತಿ ಬದುಕೂ ಸಹ ನೇರವಿಲ್ಲ. ಕೆಲವು ದೃಶ್ಯಗಳಿಗೆ (ರೇಪ್, ಹೆರಿಗೆ ಇತ್ಯಾದಿ) ಕಿರುಚಾಡಿ ನರ್ವಸ್ ಡೌನ್ ಆಗುವ, ತೀರಾ ಎಮೋಷನಲ್ ಆದಾಗ ತಾವೇ ಡಿಪ್ರೆಸ್ ಆಗುವ ಸಂಭಾವಗಳೂ ಉಂಟು. ಸಿನಿಮಾ ರಂಗದ ಎಲ್ಲ ವಿಭಾಗದಲ್ಲೂ ಆಕೆ ಒಂದಲ್ಲ ಒಂದು ರೀತಿಯಲ್ಲಿ ಹಿಂಸೆಗೆ ಒಳಗಾಗುತ್ತಾಳೆ. ಆದರೆ ಅದು ಹಿಂಸೆ ಎಂದು ತಿಳಿದು ನೋಯಲಾರದೆ ಮನಸ್ಸನ್ನು ಅದು ಸಹಜ ಎಂಬ ಸ್ಥಿತಿಗೆ ಒಗ್ಗಿಸಿಕೊಂಡಿದ್ದಾಳೆ. ಇವಕ್ಕೆಲ್ಲಾ ಅಪವಾದ ವಾಗುವ ಹಾಗೆ ಕೆಲವು ಗಂಭೀರವಾದ, ಅಧಿಕಾರಯುತವಾಗಿ ಸ್ಥಾನ ಪಡೆವಂಥ ವಿದ್ಯಾವಂತ ನಟಿಯರು ಬರುತ್ತಿದ್ದಾರೆ. ಇಂಥವರಿಂದ ಮುಂದಿನ ದಿನಗಳಲ್ಲಿ ಬದಲಾವಣೆ ಕಾಣಲು ಸಾಧ್ಯವೇ ಕಾದು ನೋಡಬೇಕು. ಇವರೂ ಕೂಡ ಜನಪ್ರಿಯ ನಾಯಕ ನಟರ ಪರಪೀಡರ ಪ್ರವೃತ್ತಿಯಿಂದ ಬಿಡಿಸಿಕೊಂಡು ಬರುವುದು ಸುಲಭವೇನಲ್ಲ.

ಕೌಟುಂಬಿಕ ನೆಲೆಯಲ್ಲೂ ಈ ಕಲಾವಿದೆಯರು ಸುಖಿಗಳಲ್ಲ. ವಿವಾಹಿತರಾಗಿದ್ದರೆ ಗಂಡನೇ ಶೋಷಕ. ದುಡಿದು ತಂದರೆ ಕಿತ್ತುಕೊಂಡಾನು ಆ ದುಶ್ಚಟದವ. ಅಥವಾ ತಿಳಿದೂ ತಿಳಿದೂ ಸಂಶಯವನ್ನೇ ಮುಂದೆ ಮಾಡಿ ಹಿಂಸಿಸಬಹುದು. ಕುಟುಂಬದ ಇತರ ಸದಸ್ಯರಿಗೆ ಆಕೆಯ ವೃತ್ತಿಯ ಬಗ್ಗೆ ಗೌರವವಿಲ್ಲ, ಆದರೆ ಆಕೆಯ ಸಂಪಾದನೆ ಗಣನೀಯವಾದರೆ ಅದಕ್ಕಾಗಿ ಸಹಿಸುತ್ತಾರೆ. ಮನೆಯ ಶುಭ ಕಾರ್ಯಗಳಲ್ಲಿ ಆಕೆಯನ್ನು ಜಾಣತನದಲ್ಲೇ ಹಿಂದೆ ಸರಿಸಿರುತ್ತಾರೆ.

ಹೀಗೆ ಆಕೆ ಎಲ್ಲ ನೆಲೆಯಿಂದಲೂ ಹಿಂದಕ್ಕೆ ಒತ್ತಾಯಿಸಲ್ಪಡುತ್ತಾಳೆ. ಇವರೆಲ್ಲ ಪತ್ರಿಕಾ ಮಾಧ್ಯಮಕ್ಕೆ ಬಿಸಿ ಬಿಸಿ ಸುದ್ದಿಗಳು. ಜನ ಸಾಮಾನ್ಯರಿಗೆ ಈ ಜನರ ಖಾಸಗಿ ಬದುಕಿನ ಬಗ್ಗೆ ಅತ್ಯಂತ ಕುತೂಹಲವಿದೆಯಾದ್ದರಿಂದ ಇವರುಗಳ ಖಾಸಗಿ ಬದುಕಿನ ಬಗ್ಗೆ, ಹಲವು ಬಾರಿ ಕಲ್ಪಿತ ಕಥೆಗಳನ್ನು ಸೇರಿಸಿ ರಂಜಕವಾಗಿ ಬರೆಯಲಾಗುತ್ತದೆ. ಇಂಥ ಬರಹಗಳಿಂದಾಗಿ ಈ ಕಲಾವಿದೆಯರಿಗೆ ಅನೇಕ ರೀತಿಯ ತೊಡಕುಗಳು ಎದುರಾಗುತ್ತವೆ.

ವಿವಾಹ, ವಿಚ್ಛೇದನ, ಗರ್ಭಿಣಿ, ನಿವೃತ್ತಿ, ಅನೈತಿಕ ಸಂಬಂಧ, ಚಿತ್ರೀಕರಣದಲ್ಲಿ ನಡೆದುಕೊಳ್ಳುವ ರೀತಿ ಇತ್ಯಾದಿ ಹತ್ತಾರು ವಿಷಯಗಳನ್ನು ಬಹುತೇಕ ತಿರುಚಿಯೇ ಬರೆಯುವ ಕೆಲವು ಪತ್ರಿಕೆಗಳ ಕಾರಣದಿಂದ ಮಾನಸಿಕವಾಗಿ,

ಕೌಟುಂಬಿಕವಾಗಿ, ವೃತ್ತಿಯಲ್ಲಿ, ಒಮ್ಮೊಮ್ಮೆ ಸಾಮಾಜಿಕವಾಗಿ ಸಹ ವಿಚಿತ್ರ ಸಿಕ್ಕುಗಳನ್ನು ಎದುರಿಸಬೇಕಾಗುತ್ತದೆ.

ಈಚಿನ ಆಧುನಿಕ ತಂತ್ರಜ್ಞಾನ ಕೂಡಾ ಸ್ತ್ರೀಯರಿಗೆ ಕುತ್ತಾಗಿಯೇ ಎದುರಾಗುತ್ತಿದೆ. ಬೇರೆಯವರ ಛಾಯಾ ಚಿತ್ರಗಳಿಗೆ ಜನಪ್ರಿಯರ ತಲೆಗಳನ್ನು ಜೋಡಿಸಿ ತಪ್ಪು ಅರ್ಥ ಬರುವ ಹಾಗೆ ಬಳಸಲಾಗುತ್ತಿದೆ. ಈಚೆಗೆ ಕಂಪ್ಯೂಟರೀಕರಣದಂಥ ತಂತ್ರಜ್ಞಾನವಂತೂ ಅಸಭ್ಯ-ಅಶ್ಲೀಲ ಚಿತ್ರಗಳನ್ನು ತಯಾರಿಸಿ ಜನಪ್ರಿಯ ನಟಿಯರ ತಲೆಗಳನ್ನು ಮರು ಜೋಡಿಸಿ ಪ್ರದರ್ಶಿಸುವವರೆಗೆ ಹೋಗಿದೆ.- ಇಂಥ ಲಾಭಕ್ಕಾಗಿ ಮಾಡುವ ವಂಚನೆಯ ತೀವ್ರ ಪರಿಣಾಮ ಕಲಾವಿದೆಯರ ಮೇಲೆ ಆಗುತ್ತಿದೆ.

ಪ್ರಚಾರಕ್ಕಾಗಿ ಬಳಸುವ ಭಿತ್ತಿ ಪತ್ರಗಳು, ಜಾಹಿರಾತುಗಳು, ಫೋಟೋ ಕಾರ್ಡ್ಸ್ ಈ ಎಲ್ಲ ಕಡೆ ಕಲಾವಿದೆಯರನ್ನು ಪ್ರಚೋದಕಾರಿ ವಸ್ತುಗಳಾಗಿ ಬಳಸಲಾಗುತ್ತಿದೆ. (ಹಿಂದೆ 'ಬೆಟ್ಟದ ಹುಲಿ' ಚಿತ್ರದಲ್ಲಿ ಜಯಂತಿಯವರು ಅಭಿನಯಿಸಿದ್ದಾಗ, ಗೋಡೆಗೆ ಅಂಟಿಸಿದ ಪೋಸ್ಟರ್‌ನಲ್ಲಿ ಆಕೆಯ ಅಂಗಸೌಷ್ಠವೇ ಪ್ರಧಾನವಾಗಿತ್ತು. ಅಲ್ಲಿಂದ ಪ್ರಾರಂಭವಾಗಿ ಇವತ್ತಿನವರೆಗೆ ಅಂಥ ಅಂಶವೇ ಅಧಿಕವಾಗಿ ತೋರುತ್ತಿದೆ).

ಪತ್ರಿಕಾ ಮಾಧ್ಯಮಗಳಿಗೂ ಕೂಡಾ ಸಾಮಾಜಿಕರಲ್ಲಿ ಎಚ್ಚರ ಮೂಡಿಸುವ ಅಥವಾ ಮಾಧ್ಯಮದ ಉದ್ದೇಶ, ಜವಾಬ್ದಾರಿ ಎಲ್ಲವೂ ಹಿಂದೆ ಸರಿದಿದೆ. ಮಾರಾಟವೇ ಪ್ರಧಾನವಾಗುತ್ತಾ ಆದಾಗಲೇ ಕೀಳದರ್ಜೆಯ ಅಭಿರುಚಿಗಳಿಗೆ ಒಗ್ಗಿರುವ ಸಮೂಹವೊಂದನ್ನು ಲಕ್ಷ್ಯದಲ್ಲಿಟ್ಟು ಅದಕ್ಕೆಂದೇ ವಿಚಿತ್ರ ಭಾಷೆ, ಚಿತ್ರಗಳು-ಅವಕ್ಕೆ ಕೊಡುವ ಶೀರ್ಷಿಕೆಗಳು, ಸುದ್ದಿ ಶೀರ್ಷಿಕೆಗಳಲ್ಲೂ ಪ್ರಚೋದಕತೆ ಇತ್ಯಾದಿ ಪ್ರಧಾನ ಗುಣವಾಗಿದೆ.

ಸಮೂಹ ಅತ್ಯಾಚಾರದಂಥ ಸುದ್ದಿಯನ್ನು ಬರೆಯುವ ಲೇಖನಿ ಕೂಡಾ ತಾನು ಎದುರಿಗೇ ಇದ್ದು ನೋಡಿದ ಹಾಗೆ ವಿವರಣಾತ್ಮಕವಾಗಿ ಬರೆಯುತ್ತಾ ಕುಣಿಯುತ್ತದೆ. ಕಳ್ಳತನ, ಅಪಘಾತದಂಥ ಸುದ್ದಿಯಷ್ಟೇ ಪ್ರಾತಿನಿಧ್ಯವಲ್ಲ-ಅದರಾಚೆಗಿನ ರೋಚಕತೆ. ಹಾಗೆ ವಿವರಿಸಿದ ಮೇಲೆ ಅಪರಾಧಿಗಳು ಯಾರು, ಅವರಿಗೆಂಥ ಶಿಕ್ಷೆ ಇತ್ಯಾದಿ ಸುದ್ದಿಗಳನ್ನು ಕೊನೆಯವರೆಗೆ ಕೈಗೆತ್ತಿಕೊಳ್ಳುವುದಿಲ್ಲ. ಪತ್ರಿಕಾ ಮಾಧ್ಯಮ ತನ್ನ ಮೂಲಭೂತ ಉದ್ದೇಶವನ್ನು ವಿಸ್ತರಿಸಿ ಮಾರುಕಟ್ಟೆಯ ಸರಕಾಗುತ್ತಿರುವಾಗ ಅದೂ ಕೂಡಾ ಸಮುದಾಯದ 'ಕೆಟ್ಟ ಅಭಿರುಚಿ'ಯನ್ನೇ ಪೋಷಿಸುತ್ತ, ಪ್ರಚೋದಕ ಗುಣದಿಂದಲೇ ಉಳಿದುಕೊಂಡು ಬರುತ್ತಿದೆ.

ಪತ್ರಿಕಾ ಮಾಧ್ಯಮದಲ್ಲಿ ಸ್ತ್ರೀಯರ ಪ್ರವೇಶ ಆರಂಭದಲ್ಲಿ [illegible] ಈ ದಿನಗಳಲ್ಲಿ ಸ್ತ್ರೀಯರು ಅಧಿಕವಾಗಿ ತೊಡಗಿದ್ದಾರೆ, ಮತ್ತು ಸಾಟಿಯಿಲ್ಲದ ದಿಟ್ಟತನ ಮೆರೆದಿದ್ದಾರೆ. ಆದರೆ ಬಹುತೇಕ ಅಂಥ ವಿಪುಲವಾದ ಅವಕಾಶವೇ ಸಿಗದ ಹಾಗೆ ನೋಡಿಕೊಳ್ಳುವ ಹುನ್ನಾರವೂ ಇರುತ್ತದೆ. ಇಂಗ್ಲೀಷ್ ಪತ್ರಿಕೆಗಳ ವರದಿಗಾರ್ತಿಯರೆಂದರೆ ಅದೊಂದು ರೀತಿಯ ಹೇವಳವಿದೆ. ಅವರ ಬರಹಗಳಿಗಿಂತ ಉಡುಪು, ಸ್ವಭಾವಗಳನ್ನು ಕುರಿತು ಟೀಕಿಸುವವರೇ ಅಧಿಕ. ಇನ್ನು ಕನ್ನಡ ಪತ್ರಿಕೆಗಳಲ್ಲಿ ಇವರಿಂದೇನಾದೀತು ಎಂದು ಹಂಗಿಸುತ್ತಾ ಹೊರಗಿನವರಿಗೆ ಅಸೈನ್‌ಮೆಂಟ್ಸ್ ಕೊಡುವುದೋ, ಅವರ ಬರಹಗಳಿಗೆ ಬೈಲೈನ್ ಕೂಡ ಕೊಡದಿರುವುದೋ, ಅಥವಾ ಗಮನ ಸೆಳೆಯದ ಮತ್ತು ಅಷ್ಟೇನೂ ಆಕರ್ಷಕ ಕೆಲಸ ಎನ್ನಿಸದ ಸಾಮಾನ್ಯ ವಿಭಾಗದಲ್ಲಿ ಕೂರಿಸಿ ಆಕೆಯ ಉತ್ಸಾಹ ಭಂಗ ಮಾಡುವುದೋ ಕೂಡ ನಡೆಯುತ್ತದೆ. ಕೆಲವೊಮ್ಮೆ ಅವರ ವರ್ಗಾ ವರ್ಗಿಯ ಸಮಸ್ಯೆಗಳೂ ಏಳುವುದುಂಟು. ಆದರೆ ಈಚಿನ ದಿನಗಳಲ್ಲಿ ಇಂಥ ಸಮಸ್ಯೆಗಳನ್ನು ಮೀರಿ ತನ್ನತನವನ್ನು ಮೆರೆಯುವ ಸಾಮರ್ಥ್ಯ ತೋರಿದವರೂ ಇದ್ದಾರೆ.

ಬಹುತೇಕ ಕೆಲವು ವಿಷಯಗಳನ್ನು ಹೊರಗೆಳೆಯಲು ತರುಣಿಯರಾದರೆ ಅನುಕೂಲ ಎಂಬ ಜಾಣತನವನ್ನು ವ್ಯವಸ್ಥೆ ತೋರಿಸುತ್ತದೆ.

ಅಲ್ಲೆ ಇದ್ದೂ ಅಲ್ಲಿ ನಡೆಯುವ ಸ್ತ್ರೀಯರ ಮೇಲಿನ ಹಿಂಸೆ ಇತ್ಯಾದಿಗಳನ್ನಾಗಲೀ, ಅಲ್ಲಿ ಬರುವ ವರದಿಗಳ ವಿಕೃತ ರೂಪವನ್ನಾಗಲೀ ಪ್ರಶ್ನಿಸಿ ಪ್ರತಿಭಟಿಸುವುದು ಅಷ್ಟಾಗಿನ್ನೂ ಸಾಧ್ಯವಾಗಿಲ್ಲ.

ತ್ವರಿತ ಗತಿಯಲ್ಲಿ ಮುಂದುವರಿಯುತ್ತಿರುವ ಆಧುನಿಕ ತಂತ್ರಜ್ಞಾನಕ್ಕೆ ಒಡ್ಡಿಕೊಂಡ ಪತ್ರಿಕಾ ಮಾಧ್ಯಮದ ವೇಗಕ್ಕೆ ಇನ್ನು ಹೊಂದಿಕೊಳ್ಳುವುದು ಎಲ್ಲರಿಗೂ ಸಾಧ್ಯವಾಗಿಲ್ಲ ಎಂಬುದೂ ಮುಖ್ಯವೇ.

ಈ ಎಲ್ಲ ಸಮಸ್ಯೆಗಳಿಗೂ ಪರಿಹಾರವೆಂದರೆ ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕೆಂಬುದು. ಯಾವ ಗ್ರಾಹಕನನ್ನು ಮುಂದಿಟ್ಟುಕೊಂಡು ಈ ಮಾಧ್ಯಮಗಳು ಈ ಮಾಧ್ಯಮಗಳ ಅತ್ಯಾಚಾರ ಮಾಡುತ್ತಿದೆಯೊ ಆ ಗ್ರಾಹಕನೇ ಎದ್ದು ಪ್ರಶ್ನಿಸಬೇಕು, ಬಂಡೇಳಬೇಕು, 'ಒಲ್ಲೆ' ಎನ್ನಬೇಕು. ಅಂಥ ಒಂದು ಸ್ಥಿತಿಗೆ ಗ್ರಾಹಕನನ್ನು ಸಿದ್ಧಗೊಳಿಸುವ ಕೆಲಸ ಗಂಭೀರವಾಗಿ ಇಂಥ ವಿಷಯಗಳ ಬಗ್ಗೆ ಯೋಚಿಸುತ್ತಿರುವಂಥ ಸಂಘಟನೆಗಳಿಂದ ಆಗಬೇಕು. ನಮ್ಮ ಕಾರ್ಯ ವಿಧಾನದಲ್ಲೇ ಈ ಬಗೆಯ ಯೋಜನೆಗಳನ್ನು ಹಾಕಿಕೊಳ್ಳಬೇಕು.

●

# ಸಿನೆಮಾದಲ್ಲಿ ಮಹಿಳೆ - ಕ್ರೌರ್ಯ

**ವೈಶಾಲಿ ಕಾಸರವಳ್ಳಿ**

ಯಾವುದೇ ಉದ್ಯಮದಲ್ಲೂ ಬಂಡವಾಳ ಹಾಕಿರುತ್ತಾರೆ. ನಷ್ಟವಾದಾಗ ಇದ್ದಬದ್ದ ಸಾಮಾನು ಮಾರಿಕೊಂಡರೆ ಬೇರೆ ಉದ್ಯಮದಲ್ಲಿ ನಾಲ್ಕು ಕಾಸು ಬರಬಹುದು, ಆದರೆ ಒಂದು ಸಲ ನಷ್ಟವಾದರೆ ಒಂದು ಪೈಸ ಕೂಡ ಸಿಗದೇ ಇರೋವಂತದ್ದು ಅಂದರೆ ಸಿನೆಮಾ ಮಾತ್ರ. ಸಿನೆಮಾ ಫ್ಲಾಫ್ ಆಯ್ತು ಎಂದರೆ ಏನೂ ಸಿಗೋದಿಲ್ಲ. ಸಿನೆಮಾ ಮಾಡುವುದಕ್ಕೆ ಕೈಹಾಕೋದಂದ್ರೆ ದೊಡ್ಡ ರಿಸ್ಕ್. ಇದನ್ನ ತಂದುಕೊಳ್ಳದೇ ಇರೋದಕ್ಕೆ ಯಶಸ್ಸು ಗ್ಯಾರಂಟಿಯಾಗಬಲ್ಲಂತ ಕೆಲ ಅಂಶಗಳನ್ನು ಹಾಕುವುದು ನಿರ್ಮಾಪಕರಿಗೆ ದಾರಿಯಾಯಿತು. ಸಿನೆಮಾ ಜನಪ್ರಿಯ ಆಗಿ ಲಾಭ ಸಿಗಬೇಕೆಂದರೆ ಅದರಲ್ಲಿ ರೋಚಕವಾದ ಅಂಶಗಳನ್ನು ಸೇರಿಸಲು ಪ್ರಾರಂಭಿಸಿದರು. ರೋಚಕ ಅಂದರೆ ಮೊಟ್ಟ ಮೊದಲಿಗೆ ಬರುವುದೇ ಸೆಕ್ಸ್. ಮೊದಲಿಗೆ ಇದೆಲ್ಲ ಇರಲಿಲ್ಲ. ಪ್ರಾರಂಭದಲ್ಲಿ ಪೌರಾಣಿಕ, ನಂತರ ಸಾಮಾಜಿಕ ಸಿನೆಮಾಗಳೆಂದರೆ ಕೆಲವು ಮೌಲ್ಯಗಳನ್ನು ಎತ್ತಿ ಹಿಡಿಯೋ ಅಂತ ಸಿನೆಮಾ ಮಾಡ್ತಾ ಇದ್ರು. ನಿಧಾನಕ್ಕೆ ಜನಪ್ರಿಯತೆ ಗಳಿಸಲಿಕ್ಕೆ ರೋಚಕತೆಯ ಕಡೆ ಹೊರಳಿದ ಹಾಗೆ ಹೆಚ್ಚೆಚ್ಚು ಮೆಲೋಡ್ರಾಮ ಅಂಶಗಳನ್ನ ಸೇರಿಸತೊಡಗಿದರು. ಆಮೇಲೆ ಸೆಕ್ಸ್, ಮುಂದುವರೆದು ಹಿಂಸೆ, ಹೀಗೆ. ಈಗೆಲ್ಲ ಹಿಂಗೆ ಜತೆ ಸೆಕ್ಸ್ ಇರಬೇಕು. ಇಬ್ಬರು ಹೊಡೆದಾಡುತ್ತಾ ಇದ್ದಾರೆಂದರೆ ಅಷ್ಟೊಂದು ಥ್ರಿಲ್ ಅನ್ನಿಸೋದಿಲ್ಲ. ಅವರು ಒಂದು ಹೆಣ್ಣಿಗಾಗೇ ಬಡಿದಾಡುತ್ತಿದ್ದಾರೆಂದರೆ ಹೆಚ್ಚು ರೋಚಕ ಅನ್ನಿಸುತ್ತೆ. ಹಿಂಸೆಯಲ್ಲಿ ರೇಪ್ ಅಂದ್ರೆ ಪ್ರೇಕ್ಷಕರಿಗೆ ಕಿಕ್ ಕೊಡೋವಂತದ್ದು ಅಂತ ಭಾವಿಸ್ತಾರೆ. ಮೊದಲೆಲ್ಲ ಒಬ್ರು ರೇಪ್ ಮಾಡ್ತಾ ಇದ್ರು, ಆಮೇಲೆ ಸಾಮೂಹಿಕ ರೇಪ್ ಮಾಡಿಸಕ್ಕೆ ಪ್ರಾರಂಭಿಸಿದರು. ಒಟ್ಟಿನಲ್ಲಿ ಯಾವುದು ಅತ್ಯಂತ ರೋಚಕ ಅಂತದನ್ನ ಹುಡುಕಿ ತೆಗೆದು ಹಾಕುತ್ತಾರೆ, ಸಿನೆಮಾ ಯಶಸ್ವಿ ಆಗಬೇಕಂತ ಅವರಿಗೆ ಹಾಕಿದ ದುಡ್ಡು ವಾಪಸ್ಸು ಬರಬೇಕು. ಸಮಾಜದ ಮೇಲೆ ಇದರಿಂದ ಎಂತಹ ಪರಿಣಾಮವಾಗುತ್ತದೆಂದು ಗಮನಿಸುವುದಿಲ್ಲ. ಇಲ್ಲಿ ಹೆಣ್ಣು ಮಕ್ಕಳನ್ನು ಬಳಸೋ ರೀತಿ ಇದೆಯಲ್ಲ, ಅದು ನಿಜಕ್ಕೂ ಕ್ರೌರ್ಯ.

ಉದಾಹರಣೆಗೆ, ಸಾಮೂಹಿಕ ಅತ್ಯಾಚಾರದ ದೃಶ್ಯ ಮಾಡಲು ಯಾರು ಮುಂದೆ ಬರ್ತಾರೆ? ಯಾರೂ ಬರೋದಿಲ್ಲ. ಅವರಿಗೆ ದುಡ್ಡಿನ ಆಸೆ ತೋರಿಸುತ್ತಾರೆ. ಅತ್ಯಂತ ಬಡ ಕುಟುಂಬದ ಹಿನ್ನೆಲೆಯ ಅಸಹಾಯಕತೆ ಅವರಿಗೆ ಇರುತ್ತೆ. ಇಂತಹ ಅಸಹಾಯಕತೆಯನ್ನ ಬಳಸಿಕೊಂಡೇ ಹಿಂದೆಯೆಲ್ಲ ಕ್ಯಾಬರೇ ನೃತ್ಯ ಮಾಡಿಸುತ್ತಿದ್ದರು. ಸಿನೆಮಾ ರಂಗದಲ್ಲಿ ಇಂಥವರು ಅನುಭವಿಸುವ ಅವಮಾನ, ಮಾನಸಿಕ ಆಘಾತಗಳು ಅತ್ಯಂತ ಕ್ರೂರ.

ಇತ್ತೀಚೆಗೆ ನಾಯಕಿಯರೂ ರೇಪ್ ಆಗುತ್ತಾರೆ. ಗರ್ಭಿಣಿ ಸ್ತ್ರೀಯನ್ನು ಎಳೆದುಕೊಂಡು ಬಂದು ಸಾಯೋ ಮುಂಚೆ ಗರ್ಭಪಾತವಾಗುವಂತೆ ಎಳೆದು-ಬಡಿದಾಡಿ, ರಕ್ತ ಚಿಲ್ಲೆಂದು ಗೋಡೆಗೆ ಚಲ್ಲುವಂತೆ ತೋರಿಸಿ, ಕೊನೆಗೆ ಗಂಡನ ಪಾದದ ಮೇಲೆ ಬಿದ್ದು ಸಾಯುವಂತೆ ಮಾಡಿದರೆ ರೋಚಕತೆಯ ಉತ್ತುಂಗ ತಲುಪಿದ ಹಾಗೆ. 'ಅಂತ' ಅನ್ನುವ ಸಿನೆಮಾ ಇಂತಹ ಅಸಹನೀಯ ಕ್ರೌರ್ಯ-ಸೆಕ್ಸ್‌ನ ಸಂಸ್ಕೃತಿಗೆ ನಾಂದಿ ಹಾಕಿದ್ದು. ಈ ಚಿತ್ರದಲ್ಲಿ ನಾಯಕನ ತಂಗಿ ಮೇಲಿಂದ ಬಿದ್ದು ಸಾಯುವಾಗ ಬರೀ ಲಂಗ-ರವಿಕೆಯಲ್ಲಿರುತ್ತಾಳೆ. ಮೇಲಿಂದ ಬಿದ್ದು ಸತ್ತಾಗಲೂ ಅವಳ ದೇಹ ಮಾತ್ರ ಅರೆನಗ್ನವಾಗಿ ಪ್ರೇಕ್ಷಕರಿಗೆ ಕಾಣುತ್ತಿರಬೇಕು. ನೋಡುವ ಪ್ರೇಕ್ಷಕರೆಲ್ಲ ಪುರುಷರೇ ಎಂದು ತಿಳಿದುಕೊಂಡಾಗ ಈ ರೀತಿಯ ಚಿತ್ರ ತೆಗೆಯಲು ಸಾಧ್ಯ. ಯಾರೂ ಮಹಿಳೆಯರು ನೋಡಲಿ ಎಂದು ಸಿನೆಮಾ ಮಾಡುವುದಿಲ್ಲ. ಪುರುಷರಿಗೆ ರೋಚಕವಾಗಿರಬೇಕು, ಅವರಿಗೆ ಖುಷಿ ಕೊಡಬೇಕು. ಇದು ಅತ್ಯಂತ ದುಃಖದ ಸಂಗತಿ. ಎಲ್ಲ ಮುಗಿದು ಕೊನೆಗೇ "ಜನನೀ ಜನ್ಮ ಭೂಮಿ....." ಎಂದು ಬಿಟ್ಟರೆ ಎಲ್ಲ ಸಮಸ್ಯೆಗೂ ಪರಿಹಾರ ಸಿಕ್ಕ ಹಾಗೆ ಎಂಬ ಸೂತ್ರ ಇಟ್ಟುಕೊಂಡೇ ಸಿನೆಮಾ ಮಾಡುವುದು.

ಇನ್ನು ಈ ಹಾಡುಗಳ ದೃಶ್ಯದಲ್ಲಿ, ನಾಯಕಿಯೊಬ್ಬಳೇ ತುಂಡು ಬಟ್ಟೆ ಹಾಕಿಕೊಂಡಿದ್ದರೆ ಸಾಲದು, ಗುಂಪಾಗಿ ಎಕ್ಸ್‌ಟ್ರಾ ನೃತ್ಯಗಾತಿಯರನ್ನ ಇನ್ನೂ ತುಂಡು ಬಟ್ಟೆಯಲ್ಲಿ

*ನಾವು ಹೆಂಗಸರು ಯಾವುದೇ ಸೀರಿಯಲ್ ನಿರ್ದೇಶನ ಮಾಡಲಿ, ಸ್ಕ್ರಿಪ್ಟ್ ಬರೆಯಲಿ, ಅದು ನಾವೇ ಮಾಡಿದ್ದೇವೆಂದು ಯಾರೂ ಒಪ್ಪಲ್ಲ. ಗಂಡ ನಿರ್ದೇಶಕ. ಅವರೇ ಎಲ್ಲ ಮಾಡಿಕೊಟ್ಟಿರುತ್ತಾರೆ ಎಂದೇ ಗಟ್ಟಿಯಾಗಿ ನಂಬುತ್ತಾರೆ. ಹೆಂಗಸರು ಬುದ್ಧಿವಂತಿಕೆ ಉಪಯೋಗಿಸ್ತಾರೆ ಅನ್ನೋದನ್ನ ಒಪ್ಪಲ್ಲ. ಬುದ್ಧಿ ಇರೋದು ಗಂಡಸಿಗೆ. ಹೆಂಗಸರು ಅವರ ನೆರಳಷ್ಟೇ ಎಂದು ಭಾವಿಸುತ್ತಾರೆ.*

ಕುಣಿಸುತ್ತಿರುತ್ತಾರೆ. ಅವರನ್ನ ಯಾರೂ ನೋಡೋದಿಲ್ಲ. ಆದರೆ ನಿರ್ದೇಶಕನಿಗೆ ಇಲ್ಲಿ ದೃಶ್ಯ ಶ್ರೀಮಂತಿಕೆ ಬರಬೇಕು ಅನ್ನುವ ಉದ್ದೇಶ. ಮತ್ತೆ ಪ್ರೇಕ್ಷಕ ಪುರುಷ ಅನ್ನುವ ಕಲ್ಪನೆಯೇ ಇಲ್ಲಿ ಪ್ರಧಾನ. ಇವರನ್ನ ಜೂನಿಯರ್ ಕಲಾವಿದರೆನ್ನುತ್ತಾರೆ. ಒಂದು ಹಾಡಿಗೆ ಇಂತಿಷ್ಟು ಹಣ ಅಂತ ಇವರನ್ನು ಸಪ್ಲೈ ಮಾಡೋ ಕಂಟ್ರಾಕ್ಟರುಗಳಿರುತ್ತಾರೆ. ಕಮಿಷನ್ನೂ, ಅದೂ-ಇದೂ ಅಂತ ಇಲ್ಲಿ ನಡೆಯೋ ಶೋಷಣೆ ಕಲ್ಪನೆಗೆ ನಿಲುಕದ್ದು.

ಸಿನೆಮಾದ ವಸ್ತು ನಿರೂಪಣೆಯಲ್ಲಿ ಯಾವತ್ತೂ ಇರುವ ಸಿದ್ಧ ಸೂತ್ರವೆಂದರೆ ಒಂದು "ಒಳ್ಳೇ ಹೆಂಗಸಿನ" ಕಲ್ಪನೆ. ಮೊದಲನೇ ದೃಶ್ಯದಲ್ಲಿ ಇವಳು ತುಳಸಿ ಪೂಜೆ ಮಾಡುತ್ತಿರುತ್ತಾಳೆ. ಗಂಡನ ಪಾದ ಮುಟ್ಟಿ, ತಾಳಿ ಕಣ್ಣಿಗೊತ್ತಿಕೊಂಡು ಅಡಿಗೆ ಮನೆ ಸೇರ್‍ತಾಳೆ. ಅತ್ತೆ-ಮಾವ, ಮಕ್ಕಳು ಮರಿ ಸೇವೆ ಅಂತ ಇಡೀ ದಿನ ಸವೆಸ್ತಾಳೆ. ಸಿನೆಮಾ ಎಂತಹ ಪ್ರಭಾವಶಾಲೀ ಮಾಧ್ಯಮ ಎಂದರೆ ಇಂತಹ ಇಮೇಜನ್ನೇ ಮೇಲೆ ಮೇಲೆ ತೋರಿಸುತ್ತಾ ಹೋದ ಹಾಗೆ, ಇದೇ ಸತ್ಯವೇನೋ ಎಂಬ ಭ್ರಮೆ ಹುಟ್ಟಲಿಕ್ಕೆ ಪ್ರಾರಂಭವಾಗುತ್ತದೆ. ಇದು ನಿಧಾನಕ್ಕೆ ಉಣ್ಣಿಸುವ ವಿಷ ಇದ್ದ ಹಾಗೆ. ಭಾರೀ ಅಪಾಯ. ನಾವು ತುಂಬಾ ಎಚ್ಚರಿಕೆಯಿಂದ ಇರಬೇಕಾಗುತ್ತದೆ.

ಇನ್ನೊಂದು ಈ 'taming of the shrew' ಕಲ್ಪನೆ. ಇಲ್ಲಿ ಹೆಂಗಸನ್ನು ತುಂಬಾ ಬಲಶಾಲಿಯಾಗಿ ತೋರಿಸ್ತಾರೆ. ಅವಳು ಕರಾಟೆ ಮಾಡ್ತಾಳೆ, ಹತ್ತಾರು ಜನರನ್ನು ಹೊಡೆದು ಉರುಳಿಸುತ್ತಾಳೆ. ಹಠಮಾರಿಯಾಗಿರುತ್ತಾಳೆ. ಆದರೆ ಇದೆಲ್ಲ ಅವಳ ಶ್ರೇಷ್ಠತೆಯನ್ನ ತೋರಿಸಲಿಕ್ಕೆ ಮಾಡುವಂತದ್ದು. ಅವಳು ಹೆಚ್ಚೆಚ್ಚು ಬಲಶಾಲಿಯಾಗುತ್ತಾ ಹೋದ ಹಾಗೆ ನಾಯಕನನ್ನು highlight ಮಾಡುತ್ತಾ ಹೋಗುತ್ತಾರೆ. ಅವನು ಅವಳನ್ನ ಪಳಗಿಸುತ್ತಾ ಹೋಗುತ್ತಾನೆ. ಕೊನೆಗೆ ಅವನು ಬಂದು ಕೈ ಹಿಡಿದು ಬಿಟ್ಟರೆ ಇವಳು ಕರಗಿ ನೀರಾಗಿ ಬಿಡುತ್ತಾಳೆ. ಅಂದರೆ, ಅಷ್ಟೊಂದು ಶೌರ್ಯ ಇರೋವಂತ ನಾಯಕಿಯನ್ನು ಪಳಗಿಸಿದ ಕೀರ್ತಿ ಅವನಿಗೆ ಸಲ್ಲುತ್ತದೆ. ಇಷ್ಟೆಲ್ಲ ಶೌರ್ಯ ಮೆರೆದವಳು ಕೊನೆಯ ದೃಶ್ಯದಲ್ಲಿ "ಅಪ್ಪಟ ಭಾರತೀಯ ನಾರಿ"ಯಾಗಿ ಜರಿ ಸೀರೆ, ಉದ್ದ ಜಡೆ, ತಲೆ ತುಂಬಾ ಹೂವು, ದೊಡ್ಡ ಕುಂಕುಮ ಎಲ್ಲ ತೊಟ್ಟು ಗಂಡನಿಗೆ ಮೃದು ಮಾತನಾಡಿ ಕಳಿಸುತ್ತಾಳೆ. ಸಿನೆಮಾದಲ್ಲಿ ಕೊನೆಗೆ ಮನಸಿನಲ್ಲಿ ಉಳಿಯುವುದು ಈ ಕೊನೆಯ ದೃಶ್ಯವೇ ಹೊರತು ಅವಳು ಮೆರೆದ ಶೌರ್ಯವಲ್ಲ. ಇಂತಹ ಸಿದ್ಧ ಸೂತ್ರ ಬಿಟ್ಟು ತೆಗೆದರೆ ಸಿನೆಮಾ ಯಶಸ್ವಿಯಾಗುವುದಿಲ್ಲ ಎಂಬ ಭಯ ಇದೆ.

ಅದೇನೇಯಾದರೂ ಹೆಣ್ಣನ್ನ ಈ 'ದೇವಿ'ಯ ಮತ್ತು ಸೆಕ್ಸ್‌ನ ಪ್ರತೀಕವಾದ ಸಿದ್ಧ ಸೂತ್ರಕ್ಕಿಂತ ಭಿನ್ನವಾಗಿ ತೆಗೆದ ಚಿತ್ರಗಳೂ ಇದೆ. ಉದಾಹರಣೆಗೆ, "ಮೂರು ದಾರಿಗಳು" ಅನ್ನುವ ಸಿನೆಮಾ. ಉದ್ದಕ್ಕೂ ತನ್ನನ್ನು ತಾನು assert ಮಾಡಿಕೊಳ್ಳುತ್ತಾ ಹೋಗುವ ಒಂದು ಅತ್ಯಂತ ಸಂಕೀರ್ಣ ಸ್ತ್ರೀಪಾತ್ರ ಇದರ ಕೇಂದ್ರ. ಇದು ಸಂಪೂರ್ಣ ಫ್ಲಾಪ್ ಆಯ್ತು. ಪತ್ರಿಕೆಯವರೂ ಅದನ್ನ ವಸ್ತುನಿಷ್ಟವಾಗಿ ವಿಮರ್ಶಿಸಲಿಲ್ಲ, ಹಾಗೆಯೇ 'ಚಕ್ರ' ಅನ್ನುವ ಸ್ಮಿತಾಪಾಟೀಲ್ ನಟಿಸಿದ ಮತ್ತೊಂದು ಸಿನೆಮಾ. ಇತ್ತೀಚೆಗೆ 'ವಿಮೋಚನೆ' ಎನ್ನುವ ಸ್ತ್ರೀಕೇಂದ್ರಿತ ಚಿತ್ರ ಬಂದಿದೆ. ನಾಗಾಭರಣರಂತ ಹೆಸರು ಮಾಡಿದ ನಿರ್ದೇಶಕರದ್ದು, ಜಯಂತಿಯವರಂತ ನಟಿಯರಿದ್ದೂ, ನಾಯಕರಿಲ್ಲವೆಂಬ ಕಾರಣಕ್ಕೆ ಚಿತ್ರಕ್ಕೆ ಇನ್ನು ವಿತರಕರೇ ಸಿಕ್ಕಿಲ್ಲ.

ಸಿನೆಮಾ ಕಲಾವಿದರ ವೈಯಕ್ತಿಕ ಬದುಕು ಮತ್ತು ಕ್ರೌರ್ಯ : ಸಿನೆಮಾ ನಟಿಯರ ಬಗ್ಗೆ ಒಂದು ಇಮೇಜ್ ಇರುತ್ತದೆ ಜನರಲ್ಲಿ. ಅವಳು ನಮ್ಮ ಕಲ್ಪನೆಗೂ ಮೀರಿದ ಸುಂದರಿಯಾಗಿರುತ್ತಾಳೆ ಎಂಬ ಭ್ರಮೆ ಅದು. ಸಮಾಜದಿಂದ ಅವರು ದೂರವೇ ಇರಬೇಕು, ಕಾಣದೆ ಇರಬೇಕು. ಒಂದು ವೇಳೆ ಅವಳು ನಾಲ್ಕು ಜನರ ಜತೆ ಬೆರೆಯಲು ಇಷ್ಟಪಟ್ಟು ಬಂದರೆ ಅವಳು ಮಾರ್ಕೆಟ್ಟು ಕಳೆಕೊಂಡಿದ್ದಾಳೆ ಎಂಬ ಸುದ್ದಿ ಹಬ್ಬಿಸುತ್ತಾರೆ. ಅದಕ್ಕಾಗೇ ಅವರು ನಾಲ್ಕು ಗೋಡೆ ಮಧ್ಯವೇ ಇದ್ದು ಬಿಡುತ್ತಾರೆ. ನಟೀನ ಮದುವೆ ಆಗುತ್ತಾರೆಂದರೆ ದೊಡ್ಡ ಆಘಾತವೇ ಆಗಿಬಿಡುತ್ತೆ. ಆದರೆ ಅವರೂ ಇತರರಂತೇ ಸಂಸಾರ ಮಾಡಬಲ್ಲರು. ಸಿನೆಮಾದವರು ಎಲ್ಲರಂತೆ ಬದುಕುತ್ತಾರೆಂಬ ಕಲ್ಪನೆ ಜನರಿಗೆ ಬಂದರೆ ಸಿನೆಮಾದವರು ಅನ್ನುವ ಪ್ರತ್ಯೇಕತೆ ಹೋಗಿ ಅವರೂ ಬದುಕಬಹುದು. ಇಲ್ಲಿ ಒಂದು ನಟಿಯ ಅನುಭವ ನಾನು ಹೇಳಲು ಇಷ್ಟಪಡುತ್ತೇನೆ, ಮೇಲೆ ಹೇಳಿದ ವಿಚಾರಕ್ಕೆ ಕೊಂಚ ಭಿನ್ನವಾದರೂ ಕಲಾವಿದರ ವೈಯಕ್ತಿಕ ಬದುಕಿನ ದೃಷ್ಟಿಯಿಂದ ಮುಖ್ಯ ಎನ್ನುವ ಕಾರಣಕ್ಕೆ ಇದನ್ನ ಹೇಳಲಿಚ್ಛಿಸುವೆ.

*ಸಿನೆಮಾದಲ್ಲಿ ನೀವು ನಟಿಸುವ ಪಾತ್ರವನ್ನು ಬದಲಾಯಿಸೋ ಅವಕಾಶ ನಿಮಗಿದ್ಯಾ ಎಂಬ ಕೇಳುಗರ ಪ್ರಶ್ನೆಗೆ ವೈಶಾಲಿಯವರ ಉತ್ತರ; ಕೆಲ ನಿರ್ದೇಶಕರು ಒಪ್ತುತ್ತಾರೆ. ಆಗಲಿ, ನೋಡುವಾ ಎನ್ನುತ್ತಾರೆ. ಮತ್ತೆ ಕೆಲವರು ಒಪ್ಪುವುದೇ ಇಲ್ಲ. ಸಿದ್ಧ ಸೂತ್ರ ಹಾಗೆಯೇ ಇರಬೇಕೆಂಬೇ ಅವರ ನಂಬಿಕೆ. ನಾನಂತೂ ನನಗೆ ಕೊಂಚ ಕೂಡ ಒಪ್ಪಿಗೆ ಅನ್ನಿಸದಿದ್ದ ಪಾತ್ರಗಳನ್ನ ಮಾಡಿಲ್ಲ. ಮಾಡೋದಿಲ್ಲ. ತಾಳಿ ತಗೊಂಡು ಕಣ್ಣಿಗೆ ಒತ್ತಿಕೋಬೇಕು ಅನ್ನುವಂತವನ್ನ ಖಡಾಖಂಡಿತವಾಗಿ ತಿರಸ್ಕರಿಸುತ್ತೇನೆ. ಗಂಡನ ಮೇಲೆ ಗೌರವ ಇರಬೇಕು ನಿಜ. ಆದರೆ ಇವೆಲ್ಲ ತೀರಾ ಅದ್ವಾನ. ನನ್ನ ಕೈಲಿ ಸಾಧ್ಯವಿಲ್ಲ, ಕ್ಷಮಿಸಿ ಅನ್ನುತ್ತೇನೆ.*

ನಮ್ಮಲ್ಲೇ ಒಬ್ಬರು ನಟಿ, ಕೆಟ್ಟ ಕೆಟ್ಟ ಪಾತ್ರ ಮಾಡುತ್ತಾ ಇದ್ದರು. ಒಮ್ಮೆ ನಾನವರನ್ನ ಕೇಳಿದೆ. ಯಾಕೆ ನೀವು ಎಂತಾ ಪಾತ್ರ ಸಿಕ್ಕರೂ ಮಾಡುತ್ತೀರಲ್ಲ? ದುಡ್ಡಿಗಾಗಿ ಇಷ್ಟೆಲ್ಲಾ ಮಾಡಬೇಕಾ? ಕೊಂಚ ಚೂಸಿಯಾಗಿ ಇರಲು ಸಾಧ್ಯವಿಲ್ಲವಾ? ಆಗ ಆಕೆ ಹೇಳಿದ ವಿಚಾರ ನನ್ನನ್ನ ಆಳವಾಗಿ ತಟ್ಟಿತು. "ನನಗೆ ದುಡ್ಡು ಬೇಕು. ನನ್ನ ಇಬ್ಬರು ಮಕ್ಕಳನ್ನ ಸಾಕಬೇಕು. ಗಂಡ ಇಲ್ಲ", ಎಂದರು. ಆಕೆಯ ಗಂಡ ಕುಡುಕ. ಹೊಡೆದು-ಬಡಿದು ಮಾಡುತ್ತಿದ್ದದ್ದೆಲ್ಲ ನಿಜ. (ಆತ ಕೂಡ ನಟನೇ). ಪ್ರತಿ ರಾತ್ರಿ ಕುಡಿದು ಬಂದು ಹೊಡೆಯೋದು-ಬಡಿಯೋದು, ಎಲ್ಲಾ ಆದ ಮೇಲೆ ಅಡಿಗೆ ಮನೆಗೆ ಹೋಗಿ ಒಲೆ ಹತ್ತಿರ ವಾಂತಿ ಮಾಡುತ್ತಿದ್ದ. ಜತೆಗೆ ಅಲ್ಲೇ ಕಕ್ಕಸ್ಸೂ ಮಾಡುತ್ತಿದ್ದ. ಇದು ಪ್ರತೀ ದಿನ ನಡೆಯುತ್ತಾ ಬಂತು. ದಿನಾ ಬೆಳಿಗ್ಗೆ ಕ್ಲೀನ್ ಮಾಡಿ ಅಡಿಗೆ ಮಾಡಬೇಕು. ಕೊನೆಗೊಮ್ಮೆ ಸಹಿಸಲಾರದೆ ಹೊರೆಗೆ ಬಂದಳು. ಆಕೆಗೆ ಗೊತ್ತಿದ್ದುದು ನಟನೆ ಒಂದೇ. ಗಂಡನ ಜತೆಗಿನ ಆ ಭಯಂಕರ ಬದುಕಿಗಿಂತ ಸಿಕ್ಕಿದ ಪಾತ್ರ ಮಾಡಿಕೊಂಡು ಬದುಕೋದೇ ಆರಾಮವೆನಿಸುತ್ತೆಯೆನ್ನುತ್ತಾರಾಕೆ. - ಆಕೆಗೆ ಶಿಕ್ಷಣ ಇಲ್ಲ. ಎರಡೋ, ಮೂರೋ ತರಗತಿ ಓದಿದ್ದಾರೆ. ನಟನೆ ಗೊತ್ತಿದ್ದರಿಂದ ಸಿನಿಮಾಗೆ ಬಂದರು. ಒಳ್ಳೆದು, ಕೆಟ್ಟದ್ದು ಎನ್ನುವ ಬಗ್ಗೆ ನಿರ್ಣಯ ತೆಗೆದುಕೊಳ್ಳುವ ಅರಿವಿಲ್ಲ. ತಪ್ಪೆನಿಸಿದ್ದನ್ನು ಹೇಳುವ ಧೈರ್ಯ ಇಲ್ಲ. ಹೀಗಾಗಿ ಇಲ್ಲಿ ಶೋಷಣೆ ತುಂಬಾ ಸುಲಭ. ಒಮ್ಮೆ ಬಣ್ಣ ಹಚ್ಚಿದರೆ ಬಿಟ್ಟು ಬರೋ ಧೈರ್ಯ ಇರೋದಿಲ್ಲ. ಬಿಟ್ಟು ಬಂದರೂ ಬೇರೆ ಬದುಕು ಸಿಗುತ್ತದೆಂಬ ನಂಬಿಕೆ ಇರುವುದಿಲ್ಲ. ಇಲ್ಲಿ ಮಾರ್ಗದರ್ಶನ ಇರುವುದಿಲ್ಲ. ಸಿನೆಮಾದವರಿಗೆ ಇರುವಷ್ಟು ಕಮ್ಮಿ ಅನುಭವ ಬೇರೆ ಯಾರಿಗೂ ಇರುವುದಿಲ್ಲ. ವೃತ್ತಿ ರಂಗಭೂಮೀಲಿ ಇರೋವರಿಗಂತೂ ರಾತ್ರಿಯೇ ಹಗಲು-ಹಗಲೇ ರಾತ್ರಿ. ಹಗಲು ನಡೆಯುವುದರ ಬಗ್ಗೆ ಅವರಿಗೆ ಗೊತ್ತಿರುವುದಿಲ್ಲ. ಸಾಮಾನ್ಯ ಪರಿಜ್ಞಾನ ಇರೋದಿಲ್ಲ. ನಾಲ್ಕು ಜನರ ಜತೆ ಬೆರೆತು ಗೊತ್ತಿರುವುದಿಲ್ಲ. ತುಂಬಾ ಸಣ್ಣ ಚೌಕಟ್ಟಿನಲ್ಲಿ, ಯಾವುದೇ ಮಾರ್ಗದರ್ಶನವಿಲ್ಲದೆ ಬದುಕುತ್ತಿರುತ್ತಾರೆ. ಇದೊಂದು ವಿಷ ವರ್ತುಲ.

ಗಿರಿಜಾ : ವೃತ್ತಿ ರಂಗಭೂಮಿಯೇ ಒಂದು ಭ್ರಮೆ. ರಾತ್ರಿ ರಾಮನ ಪಾತ್ರ ಮಾಡಿದವನು ಹಗಲಾದರೆ ಹೆಂಡತಿಗೆ ಕಾಟ ಕೊಡುತ್ತಿರುತ್ತಾನೆ. ರಾತ್ರಿ ಕೃಷ್ಣ ಆದವನು, ಬೆಳಿಗಿದ್ದರೆ ಕುಚೇಲ ಆಗಿರುತ್ತಾನೆ. ಹಾಗೆಯೇ ಬಣ್ಣ ಹಚ್ಚಿಕೊಂಡು ರಂಜಿಸುವ ಕಲಾವಿದೆಯರ ಸ್ಥಿತಿಯಂತೂ ದೊಡ್ಡ ವಿಪರ್ಯಾಸದಂತೇ ಇರುತ್ತದೆ. ನಾಟಕಕ್ಕೆ ನಾಯಕ-ನಾಯಕಿ ಮುಖ್ಯ. ಅಕಸ್ಮಾತ್ ಅವರೇನಾದರೂ ಪರಸ್ಪರ ಆಕರ್ಷಣೆಗೆ ಒಳಗಾದರೋ ಮುಗಿಯಿತು. ಮಾಲೀಕ ತಲೇ ಮೇಲೆ ಕೈಹೊತ್ತು ಕುಳಿತುಕೊಳ್ಳುತ್ತಾನೆ. ಕೊನೆಗೆ ನಾಯಕಿಗೆ ಇಲ್ಲದ-ಸಲ್ಲದ ಆಮಿಷ ತೋರಿಸಿ ತನ್ನವಳಾಗಿಸಿಕೊಳ್ಳುತ್ತಾನೆ. ಆಕೆ ತನ್ನ ಮಗಳ ವಯಸ್ಸಿನವಳಾದರೂ ಸರಿಯೇ ಮದುವೆ ಮಾಡಿಕೊಳ್ಳುತ್ತಾನೆ. ಬಹಳಷ್ಟು ಕಂಪನಿಗಳಲ್ಲಿ ಇದು ನಡೆಯುತ್ತಾ ಬಂದಿದೆ. ಕೆಲವರು ಹೀಗೆ ಮದುವೆಯಾದವರನ್ನು ಪತ್ನಿಯರಂತೆ ನೋಡಿಕೊಳ್ಳುತ್ತಾರೆ. ಆದರೆ ಬಹುತೇಕ ಸಮಯಗಳಲ್ಲಿ ಅವಳು ಅವರ ಉಪಪತ್ನಿಯಾಗೇ ಇರುತ್ತಾಳೆ. ಅವಳಿಗೆ ಯಾವುದೇ ಸ್ಥಾನಮಾನ ಇರುವುದಿಲ್ಲ.

ಇನ್ನೊಂದು ಕಡೆ, ಕಂಪನಿಗಳಲ್ಲಿ ಮಾಲೀಕನ ಪತ್ನಿಯಾದವಳೇ ನಾಯಕಿ ಪಾತ್ರ ಮಾಡಬೇಕು. ಅವಳಿಗೆ ಎಷ್ಟೇ ವಯಸ್ಸಾಗಿದ್ದರೂ ಸರಿ, ಮತ್ತೊಬ್ಬ ಪ್ರತಿಭಾವಂತ ನಟಿ ಇದ್ದರೆ ಅವಳಿಗೆ ಅಲ್ಲಿ ಸ್ಥಾನ ಇಲ್ಲ. ಹೀಗೆ ವಿಷವರ್ತುಲದಲ್ಲಿ ಸಿಕ್ಕಿ ನಮ್ಮನ್ನು ನಾವೇ ಶೋಷಿಸಿಕೊಳ್ಳುತ್ತಿರುತ್ತೇವೆ.

ಕಲಾವಿದರಿಗೆ ತಮ್ಮದೇ ಆದ ಸಮಯ, ಸುಖ-ಸಂತೋಷ ಎಂತದ್ದೂ ಇಲ್ಲ. ನಾಟಕ ಶುರು ಆಗುವುದು ಹತ್ತು-ಹನ್ನೊಂದು ಗಂಟೆಯ ಮೇಲೆ. ಮನೆಗೆ ಬರೋ ವೇಳೆಗೆ ಬೆಳಗಿನ ಜಾವ ಆಗಿರುತ್ತೆ. ಎಷ್ಟೋ ಸಮಯ ನಾನು ಬಂದು ಮಲಗಬೇಕಾದ್ರೆ ಎದುರು ಮನೆಯವರು ರಂಗೋಲಿ ಬಿಡುತ್ತಾ ಇರುವರು. ಇದನ್ನ ನೋಡಿ ಬಹಳ ದುಃಖ ಆಗೋದು. ಹತ್ತು ಗಂಟೆಗೆ ಯಾರು ಮಲಕ್ಕೋತಾರೋ ಅವರೇ ಪುಣ್ಯವಂತರು ಅಂದುಕೊಳ್ಳುತ್ತಿದ್ದೆ. ಮತ್ತೆ ಬೆಳಗಾಗಿತೆಂದರೆ ರಿಹರ್ಸಲ್ ಅದೂ ಇದೂ ಎಂದು ಸಂಪೂರ್ಣ ಆ ಪ್ರಪಂಚವೇ ಆವರಿಸಿಕೊಂಡು ಬಿಡುತ್ತದೆ. ಹೀಗಾಗಿ ನಮಗೆ ಹೊರಗಡೆ ಪ್ರಪಂಚದಲ್ಲಿ ಏನಾಗ್ತಾ ಇದೆ ಏನೂ ಗೊತ್ತಿರುವುದಿಲ್ಲ. ನಾಟಕ ಕಂಪನಿಯೇ ನಮ್ಮ ಪ್ರಪಂಚ. ಅಲ್ಲೇ ಪ್ರೇಮ-ದ್ವೇಶ ಹೀಗೆ ಅಲ್ಲೇ ಇಡೀ ಜೀವನ ಮುಗಿಸಿದವರೂ ಇದ್ದಾರೆ.

ಕಲಾವಿದೆಯರಿಗೆ ದುಡಿದದ್ದಕ್ಕೆ ತಕ್ಕ ಪ್ರತಿಫಲ ಇದೆಯೇ? ಕೆಲ ಕಂಪನಿಗಳಲ್ಲಿ ನಡೆಯುವ ವಿಚಿತ್ರವಾದ ಶೋಷಣೆಯನ್ನು ಗಿರಿಜಾ ಹಾಸ್ಯಮಯವಾಗಿ ಇಲ್ಲಿ ಹಂಚಿಕೊಂಡರು : ದ್ರೌಪದಿ ನನಗೆ ಇಷ್ಟವಾದ ಪಾತ್ರ. ನಾನೊಂದು ಕಂಪನಿಯಲ್ಲಿ ದ್ರೌಪದಿ ಪಾತ್ರ ಮಾಡುತ್ತಿದ್ದೆ. ಭೀಮ ಪಾತ್ರದಾರಿ ನನ್ನನ್ನ ಗೊತ್ತು ಮಾಡಿಕೊಂಡು ಹೋಗಿದ್ದ. ನಾಟಕದ ದಿನ ಸುಭದ್ರ ಪಾತ್ರಧಾರಿ ಏನೋ ಕಾರಣಕ್ಕೆ ಬರಲಿಲ್ಲ. ಅರ್ಜುನ ಪಾತ್ರಧಾರಿ ನನ್ನನ್ನೇ ಸುಭದ್ರೆ ಪಾತ್ರ ಮಾಡುವಂತೆ ಕೇಳಿಕೊಂಡೆ. ನನಗೆ ಆ ಪಾತ್ರವೂ ಬರುತ್ತಿದ್ದರಿಂದ ಎರಡು ಪಾತ್ರ ಮಾಡಿದರೆ ಹೆಚ್ಚು ಹಣ ಸಿಗುತ್ತದೆಂದು ಕಷ್ಟವಾದರೂ ಪರವಾಗಿಲ್ಲವೆಂದು ಒಪ್ಪಿಕೊಂಡು ಮಾಡಿದೆ. ಕೊನೆಗೆ ಹಣ ಕೊಡುವಾಗ ದ್ರೌಪದಿ ಪಾತ್ರದ ಹಣವನ್ನಷ್ಟೇ ಕೊಟ್ಟರು. ಸುಭದ್ರೆ ಪಾತ್ರದ ಹಣ ಕೇಳಿದ್ದಕ್ಕೆ

ಭೀಮನ ಹತ್ತಿರ ಕೇಳಿ. ಅವನನ್ನು ಕೇಳಿ ತಾನೇ ಪಾತ್ರ ಮಾಡಿದಿರಿ. ಅರ್ಜುನ ಭೀಮನನ್ನೇ ಕೇಳಿ ಅಂದ. ಕೊನೆಗೆ ಬರೀ ದ್ರೌಪದಿಯೊ ಪಾತ್ರದ ಹಣದೊಂದಿಗೆ ವಾಪಸ್ಸಾದ ನಾನು ಅಂದುಕೊಂಡೆ : ಕೇವಲ ದ್ರೌಪದಿಯ ಪಾತ್ರ ಮಾಡಿಯೇ ನನ್ನ ಪಾಡು ಹೀಗಾಯಿತಲ್ಲ, ಇನ್ನೂ ಆ ಸಾಕ್ಷಾತ್ ದ್ರೌಪದಿ ಎಂತಹ ಪಾಡು ಪಟ್ಟಿರಬೇಕು!

ಹಾಗೆಯೇ ಕಳೆದ ಹತ್ತಾರು ವರ್ಷಗಳಿಂದ ಟಿವಿ ಸರಣಿಗಳಲ್ಲಿ ನಟಿಸುತ್ತಾ ಬಂದಿದ್ದೇನೆ. ಒಂದು ದಿನ ಶೂಟಿಂಗ್ ಅಂತಾರೆ. ಇಡೀ ದಿನ ಮಾಡಿರುತ್ತೇವೆ. ಒಂದೇ Episode ಆಗಿರೋದು ಮೇಡಂ ಅಂತಾರೆ. ಟಿವಿಯಲ್ಲಿ ನೋಡಿದಾಗ ಎರಡೋ ಮೂರೋ ಆಗಿರುತ್ತೆ. ಇದಕ್ಕೆಲ್ಲ ಕೊನೆ ಎಂದೋ ತಿಳಿಯದು.

**ಜಯಂತಿ :**

ಅಂದು ಸಭೆಗೆ 'ಸಿನಿಮಾ ರಂಗದಲ್ಲಿ ಕ್ರೌರ್ಯ' ಕುರಿತಂತೆ ತಮ್ಮ ವೈಯಕ್ತಿಕ ಅನುಭವಗಳನ್ನು ಹಂಚಿಕೊಳ್ಳಲೆಂದು ಬಂದಿದ್ದ ಹಿರಿಯ ನಟಿ ಜಯಂತಿಯವರು, ತಾವು ಬದುಕಿನಲ್ಲಿ ಅತ್ಯಂತ ನೊಂದವರೆಂಬುದು ಎಲ್ಲರಿಗೂ ಗೊತ್ತು. ಆದರೆ ತಮಗೊಂದು ಬಗೆಯ ಮೊಂಡು ಧೈರ್ಯವೆಂದು ಹೇಳುತ್ತಾ ಹೆಣ್ಣು ಮಕ್ಕಳಿಗೆ ಧೈರ್ಯವಿರಬೇಕಾದ್ದನ್ನು ಒತ್ತಿ ಒತ್ತಿ ಹೇಳಿದರು.

ಬಹುತೇಕ ಎಲ್ಲ ಬಗೆಯ ಸುಖ-ಸಂತೋಷಗಳಿಗೆ ಹೆಂಗಸರನ್ನೇ ಅವಲಂಬಿಸಿರುವ ಗಂಡಸರು ಕೊನೆಗೆ ಅವರಿಗೇ ಅನ್ಯಾಯ ಮಾಡುವುದು, ಹಿಂಸಿಸುವುದು ಏತಕ್ಕೆ? ಎಂಬುದು ಜಯಂತಿಯವರ ಪ್ರಶ್ನೆ.

ಹೀಗೆಲ್ಲ ಹೇಳುತ್ತಾ ತಾನು ಗಂಡಸರ ವಿರೋಧೀ ಅಲ್ಲ ವೆಂದೂ, ಗಂಡಸರು ವಿಶಾಲವಾದ ವೃಕ್ಷದ ಹಾಗೆಂದೂ, ಎಲ್ಲರಿಗೂ ನೆರಳು ಕೊಟ್ಟು ಕಾಪಾಡಬೇಕಾದವರೆಂದೂ ಜಯಂತಿಯವರು ಹೇಳಿದ ಮಾತಿಗೆ ಸಭೆಯ ಅಧ್ಯಕ್ಷತೆ ವಹಿಸಿದ್ದ ಡಾ. ವಿಜಯಾ ಅವರು ಪ್ರತಿಕ್ರಿಯಿಸುತ್ತಾ, ಜೀವನದಲ್ಲಿ ಅತ್ಯಂತ ನೊಂದವರು ಜಯಂತಿ. ವೈಯಕ್ತಿಕವಾಗಿಯೂ, ಉದ್ಯಮದಲ್ಲೂ ಹೀಗೆ ಎಲ್ಲ ನೆಲೆಯಲ್ಲೂ ತೀವ್ರ ಶೋಷಣೆಗೆ ಒಳಗಾಗಿದ್ದರೂ 'ನೀವು ವೃಕ್ಷ ಇದ್ದ ಹಾಗೆ' ಎಂದು ಹೇಳುವುದಿದೆಯಲ್ಲ ಇದನ್ನ ವಿನಯವೆನ್ನಬೇಕೋ, ಪುರುಷ ಪ್ರಧಾನತೆಯ ಸತ್ಯವೆಂದು ಒಪ್ಪಿಕೊಂಡು ಬದುಕುತ್ತಿರುವ ಪರಿ ಎನ್ನಬೇಕೋ? ಎಂದು ತೀವ್ರ ಕಳವಳ ವ್ಯಕ್ತಪಡಿಸಿದರು. ವೈಯಕ್ತಿಕ ಬದುಕಿನಲ್ಲಿ ಯಾವ ಭದ್ರತೆಯೂ ಇಲ್ಲದ ಮಟ್ಟಿಗೆ ಬಳಸಿಕೊಳ್ಳಲ್ಪಟ್ಟ ಜಯಂತಿಯವರು, ತಾವು ಕ್ರೌರ್ಯವ ಅನುಭವಿಸಿದ್ದು ಗುರುತಿಸಿ ಹೇಳಲೂ ಗೊತ್ತಾಗದಂತಹ ಮುಗ್ಧರು. ಇಂತಹ ಮುಗ್ಧತೆಯನ್ನು ಬಳಸಿಕೊಂಡೇ ವ್ಯವಸ್ಥೆ ಇಂತವರನ್ನು ಬಹಳ ರೀತಿಯಲ್ಲಿ ಶೋಷಣೆ ಮಾಡುತ್ತಾ ಬಂದಿದೆ ಎಂದು ವಿಜಯಾ ತಮ್ಮ ವಿಷಾದ ವ್ಯಕ್ತಪಡಿಸಿದರು.

"ಅಭಿನೇತ್ರಿ" ಸಂಘವನ್ನು ಕುರಿತು ಜಯಂತಿಯವರು ಮಾತನಾಡುತ್ತಾ :

ಕನ್ನಡದ ಅಭಿನೇತ್ರಿಯವರು ತುಂಬಾ ಕಷ್ಟದಲ್ಲಿದ್ದಾರೆ. ಊಟಕ್ಕೆ, ಮನೆ ಬಾಡಿಗೆಗೆ, ಮಕ್ಕಳನ್ನು ಸಾಕಲಿಕ್ಕೆ ಸಾಧ್ಯವಾಗದೆ ಆ ;ಮನೆ - ಈ ಮನೇಲಿ ಕೆಲಸ ಮಾಡಿಕೊಂಡಿದ್ದಾರೆ. ನಿಜವಾಗಿಯೂ ಯಾರು ಕಷ್ಟ ಪಡುತ್ತಾ ಇದ್ದಾರೋ ಅಂತವರಿಗೆ ಒಂದು ಸಹಾಯ ಹಸ್ತಕ್ಕಾಗಿಯೇ ಈ 'ಅಭಿನೇತ್ರಿ'. ನಮ್ಮ ಕಲಾವಿದೆಯರು ನಮಗಾರೂ ದಿಕ್ಕಿಲ್ಲ. ನಮ್ಮನ್ನ ನೋಡಿಕೊಳ್ಳುವವರು ಇಲ್ಲ ಅಂತ ಕೊರಗಬಾರದು. ಅಭಿನೇತ್ರಿ ಅನ್ನುವುದೊಂದಿದೆ. ಅದು ನಮ್ಮ ಕಷ್ಟ ಅರಿತುಕೊಳ್ಳುತ್ತೆ ಅಂತ ಅವರಿಗೆ ಅನ್ನಿಸಬೇಕು. ಅದಕ್ಕಾಗಿ ಫಂಡ್ಸ್ ಸಂಗ್ರಹಿಸುತ್ತಿದ್ದೇವೆ. ಅದನ್ನ ಬ್ಯಾಂಕಿನಲ್ಲಿ ಹಾಕಿ ತಿಂಗಳಿಗೆ ಅವರ ಮನೆಗೆ ಹಣ ಹೋಗುವ ಹಾಗೆ ಮಾಡುತ್ತೇವೆ. ಮೊದಲು ಇದಿಷ್ಟನ್ನು ಅಚ್ಚುಕಟ್ಟು ಮಾಡಿಕೋಬೇಕೆಂದು ನಮ್ಮಾಸೆ. ಯಾರೋ ಕೇಳಿದರು, ನೀವು ವರದಕ್ಷಿಣೆ ಸಮಸ್ಯೆಗೆ ಸಹಾಯ ಮಾಡ್ತೀರಾ ಎಂದು. ಖಂಡಿತಾ ನಾವು ಬರ್ತೀವಿ. ನಮ್ಮ ಹೆಣ್ಣು ಮಕ್ಕಳು ನೊಂದುಕೊಂಡು ಸಾಯಬಾರದು. ಎಲ್ಲ ಕಲಾವಿದೆಯರೂ ನಮ್ಮ "ಅಭಿನೇತ್ರಿ"ಯಲ್ಲಿದ್ದಾರೆ.

ಪುರುಷ ಪ್ರಧಾನ ಸ್ವರೂಪಿಯಾದ ತಮ್ಮ ಉದ್ಯಮದಲ್ಲಿ ಕಲಾವಿದೆಯರ ಮೇಲೆ ನಡೆಯುವ ಕ್ರೌರ್ಯದ ಬಗ್ಗೆ ಇನ್ನು ಮುಂದಾದರೂ ತಾವು ಹೆಚ್ಚು ಎಚ್ಚರಿಕೆಯಿಂದಿರಬೇಕೆಂಬುದು ಸಭೆಯಲ್ಲಿ ಭಾಗವಹಿಸಿದ್ದ ಎಲ್ಲ ಕಲಾವಿದೆಯರ ಅನಿಸಿಕೆ ಯಾಗಿದ್ದರೆ ಜತೆಗೆ ಮಹಿಳೆಯರ ಮೇಲೆ ನಡೆಯುವ ಬೇರೆ ಬೇರೆ ಬಗೆಯ ಕ್ರೌರ್ಯಗಳನ್ನು ತಡೆಯಲು ತಾವು ಒತ್ತಾಸೆಯಾಗಬೇಕೆಂದು ಅವರೆಲ್ಲರ ಕಳಕಳಿಯಾಗಿತ್ತು.

*ಮಾನಸದ ವಿಚಾರ ಸಂಕಿರಣದಲ್ಲಿ ಭಾಗವಹಿಸಿದ ನಂತರ ಗಿರಿಜಾ ಲೋಕೇಶ್‌ರವರು ಮಾನಸದ ಸರಳ ಸಮಾರಂಭಕ್ಕೆ ಮನ ಸೋತು, ತಾವು ಯಾವುದೇ ಸಭೆಗೆ ಹೋಗಲಿ ಅಲ್ಲಿ ಹಾರ ತುರಾಯಿಗಳನ್ನು ಸ್ವೀಕರಿಸದೆ, ಬದಲಾಗಿ ಮಾನಸದಂತಹ ಗುಂಪಿಗೆ ಸಣ್ಣ ಸಹಾಯ ತೋರುವ ಮೂಲಕ ನೆರವಾಗಬೇಕೆಂದು ಕೋರುತ್ತಾರೆ. ಇದರ ಫಲವಾಗಿ ಅವರು ಮಾನಸಕ್ಕೆ ಒಂದು ಸಾವಿರ ರೂ.ಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಮಾನಸ ಪರವಾಗಿ ಗಿರಿಜಾರವರಿಗೆ ಕೃತಜ್ಞತೆಗಳು.*

# ರಾಜಾಸ್ಥಾನದಲ್ಲಿ ಮಹಿಳೆಯರ ವಿರುದ್ಧ ಹೆಚ್ಚುತ್ತಿರುವ ಅಪರಾಧ

***- ವೆಂ. ವನಜ***

ಭಾರತದ ಭೂಪಟದಲ್ಲಿ ರಾಜಾಸ್ಥಾನದ ಹೆಸರು ಐತಿಹಾಸಿಕ ಮಹತ್ವ ಪಡೆದಿರುವಂತೆಯೇ ದೇಶದ ಅಭಿವೃದ್ಧಿ, ಅದರಲ್ಲೂ ಮಹಿಳೆಯರ ಸ್ಥಾನಮಾನಗಳ ಕುರಿತಂತೆ ಮಾತನಾಡುವಾಗ ನಮ್ಮ ಗಮನ ಸೆಳೆಯದೇ ಇರುವುದಿಲ್ಲ. 'ಬೀಮರ್' (ಅಂದರೆ ಹಿಂದಿಯಲ್ಲಿ ರೋಗಿಷ್ಠ ಎಂಬ ಅರ್ಥವಿದೆ) ರಾಜ್ಯಗಳಲ್ಲಿ ಒಂದಾದ (ಇತರ ರಾಜ್ಯಗಳೆಂದರೆ ಬಿಹಾರ ಮತ್ತು ಮಧ್ಯಪ್ರದೇಶ) ಇದು ಅತ್ಯಂತ ಕಡಿಮೆ ಮಟ್ಟದ ಸಾಕ್ಷರತೆ, ಬಾಲ್ಯವಿವಾಹ, ಸತಿ ಸಹಗಮನದಂಥ ಮೂಢನಂಬಿಕೆಗಳು, ಆರ್ಥಿಕ, ಸಾಮಾಜಿಕ, ರಾಜಕೀಯ ಚಟುವಟಿಕೆಗಳಲ್ಲಿ ಅತ್ಯಂತ ಕಡಿಮೆ ಮಟ್ಟದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ, ಹೆಣ್ಣು ಭ್ರೂಣ ಹತ್ಯೆ, ಶಿಶು ಹತ್ಯೆ, ಕಡಿಮೆ ಲಿಂಗ ಪ್ರಮಾಣ ಮುಂತಾದ ಹಲವು ಕಾರಣಗಳಿಗಾಗಿ, ನೇತ್ಯಾತ್ಮಕ ಗುಣಗಳಿಗಾಗಿ ಹೆಸರು ಮಾಡುತ್ತಿದೆ. ಸುಮಾರು ಒಂದು ದಶಕದ ಹಿಂದೆ ಎಳೆವಯಸ್ಸಿನ ರೂಪಾ ಕನ್ವರ್ ತನ್ನ ರೋಗಿಷ್ಠ ಪತಿ ಮರಣ ಹೊಂದಿದಾಗ ಪತಿಯ ಚಿತೆಯೇರಿ 'ಸತಿ'ಯಾ(ಗಿಸಿ)ದ ಸುದ್ದಿ ಇಡೀ ದೇಶವನ್ನೇ ತಲ್ಲಣಗೊಳಿಸಿತ್ತಾದರೂ, ಅಲ್ಲಿಯ ಜನತೆ ಅವಳ ಹೆಸರಿನ ದೇವಸ್ಥಾನ ಕಟ್ಟಿ, ಜಾತ್ರೆ ಮಾಡಿ, ಕತ್ತಿಗಳನ್ನು ಹಿಡಿದು ಮೆರವಣಿಗೆ ಮಾಡಿ ಎಲ್ಲವನ್ನೂ ವೈಭವೀಕರಿಸಿ ತನ್ನ ಮೌಢ್ಯವನ್ನು ಮೆರೆದಿತ್ತು. ಇದರ ಹೆಚ್ಚು ಪಾಲಿನ ಕೀರ್ತಿ ಅಲ್ಲಿಯ ರಾಜಕಾರಣಿಗಳಿಗೆ ಸಲ್ಲುತ್ತಿತ್ತು. (ಅವರಲ್ಲೊಬ್ಬರು ಇಂದಿನ ಆರೋಗ್ಯ ಮಂತ್ರಿ ರಾಜೇಂದರ್‌ಸಿಂಗ್ ರಾಥೋಡ್).

೧೯೯೭ರ ಅಂಕಿ ಅಂಶಗಳ ಪ್ರಕಾರ ಮಹಿಳೆಯರ ವಿರುದ್ಧದ ಅಪರಾಧಗಳಲ್ಲಿ ದೆಹಲಿ ಮೊದಲ ಸ್ಥಾನದಲ್ಲಿದ್ದು ಎರಡನೆಯ ಸ್ಥಾನ ಪಡೆದಿರುವ ರಾಜಾಸ್ಥಾನ 1992ರಲ್ಲಿ ಬನವಾರಿದೇವಿಯ ಅತ್ಯಾಚಾರ ಪ್ರಕರಣದಿಂದಾಗಿ ಎಲ್ಲರ ಗಮನ ಸೆಳೆದುದಷ್ಟೇ ಅಲ್ಲ, ಅಲ್ಲಿಯ ಮಹಿಳಾ ಸಂಘಟನೆಗಳೆಲ್ಲಾ ಒಂದುಗೂಡಿ ಹೋರಾಡಲು ಅನುವು ಮಾಡಿತ್ತು. ಇಂದು ಅದು ಅಂಥದೇ ಕಾರಣಕ್ಕಾಗಿ ಮತ್ತೆ ಸುದ್ದಿಯಲ್ಲಿದೆ. ಇತ್ತೀಚೆಗೆ ರಾಜಧಾನಿ ಜೈಪುರದಲ್ಲಿ ನಡೆದ ಜೆ.ಸಿ. ಬೋಸ್ ಹಾಸ್ಟೆಲ್ ಪ್ರಕರಣ, ಬೀನ್‌ಮಾಲ್ ಪ್ರಕರಣಗಳ ಬೆನ್ನಿಗೇ ಹಲವು ಅತ್ಯಾಚಾರ ಪ್ರಕರಣಗಳು ಬೆಳಕಿಗೆ ಬಂದಿರುವ ಹಿನ್ನೆಲೆಯಲ್ಲಿ ಪತ್ರಿಕೆಗಳು ರಾಜಾಸ್ಥಾನವನ್ನು 'ರೇಪಿಸ್ಥಾನ್' (ಅತ್ಯಾಚಾರದ ತಾಣ/ಸ್ಥಳ) ಎಂದು ಕರೆದಿವೆ. ಮೇಲಿನ ಪ್ರಕರಣಗಳನ್ನು ಸರಕಾರವಾಗಲೀ, ಸರಕಾರಿ ಯಂತ್ರಗಳಾಗಲೀ ಬಗೆಹರಿಸಿದ ರೀತಿ ಜನತೆಯನ್ನು ರೊಚ್ಚಿಗೆಬ್ಬಿಸಿದೆ. ಈ ಪ್ರಕರಣಗಳಲ್ಲಿ ನೊಂದವರು ನ್ಯಾಯ ಎಂದಾದರೂ ತಮ್ಮದಾಗಬಹುದೇ ಎಂಬ ಆತಂಕದಿಂದ ದಿನದೂಡುತ್ತಿದ್ದು, ನಿರಾಶೆಯೆಡೆಗೆ ವಾಲುತ್ತಿರುವಾಗಲೇ, ಮಹಿಳಾ ಸಂಘಟನೆಗಳಲ್ಲದೆ ಹಲವು ಪ್ರಗತಿಪರ ಸಂಘಟನೆಗಳನ್ನೊಳಗೊಂಡಂತೆ ಅರವತ್ತಕ್ಕೂ ಹೆಚ್ಚು ಸಂಘಟನೆಗಳು ಒಕ್ಕೂಟ ರಚಿಸಿಕೊಂಡು ನ್ಯಾಯಕ್ಕಾಗಿ ಹೋರಾಟವನ್ನು ಆರಂಭಿಸಿವೆ.

ಈ ಹೋರಾಟದ ಕಿಚ್ಚು ಭುಗಿಲೇಳಲು ಕಾರಣವಾದ ಘಟನೆ ಹೀಗಿದೆ. ಜೈಪುರದ ರಾಜಾಸ್ಥಾನ ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ನಿಲಯದಲ್ಲಿ 25 ವರ್ಷದ ಯುವತಿಯೊಬ್ಬಳು ಎಂಟು ಮಂದಿಯ ಗುಂಪೊಂದರ ಅತ್ಯಾಚಾರಕ್ಕೆ ಬಲಿಯಾದಳು. ಅವಳ ಕಿರುಚಾಟಕ್ಕೆ ಕೊಠಡಿಯ ಹೊರಗಿದ್ದ ವಿದ್ಯಾರ್ಥಿಗಳು ಕಿವುಡಾಗಿದ್ದರು. ನಿಲಯದ ಪಾಲಕರು ಅಸಹಾಯಕರಾಗಿದ್ದರು. ಕೊನೆಗೆ ಆ ಯುವತಿ ತಾನೇ ಹೋಗಿ ಪೋಲೀಸು ಠಾಣೆಗೆ ದೂರು ನೀಡಬೇಕಾಯಿತು. ಈ ಘಟನೆ ನಡೆದದ್ದು ಶಿಕ್ಷಕರ ದಿನಾಚರಣೆಯಂದು.

ಯುವತಿಯು ಮಧ್ಯಾಹ್ನದ 2-30 ಗಂಟೆಗೇ ಪೋಲೀಸು ಠಾಣೆ ತಲುಪಿದಳಾದರೂ ಪ್ರಕರಣ ದಾಖಲಾದದ್ದು 5 ಗಂಟೆಗಳ ನಂತರವೇ. ವೈದ್ಯಕೀಯ ಪರೀಕ್ಷೆ ನಡೆದಾಗ ಮಧ್ಯರಾತ್ರಿ. ಅವಳ ಕುಟುಂಬದವರಿಗೆ ಸುದ್ದಿ ಮುಟ್ಟಿದ್ದು ಎಫ್‌ಐಆರ್ ಸಿದ್ಧವಾದ ನಂತರ. ಈ ನಡುವೆ ಯುವತಿಯನ್ನು ಅಪರಾಧಿಗಳ ಪತ್ತೆಗಾಗಿ ದ್ವಿಚಕ್ರವಾಹನವೊಂದರಲ್ಲಿ ಕುಳ್ಳಿರಿಸಿಕೊಂಡು ತಿರುಗಾಡಿಸಿದ ಸುದ್ದಿ. ಪೋಲೀಸು ಅಧಿಕಾರಿಯೊಬ್ಬರು ಅವಳನ್ನು ಈ ಅವಧಿಯಲ್ಲಿ ಲೈಂಗಿಕವಾಗಿ ದುರುಪಯೋಗಪಡಿಸಿಕೊಂಡರೆಂಬುದು ಮತ್ತೊಂದು ಆಘಾತಕರ ಸುದ್ದಿ. ಪೋಲೀಸರು ಹೆಚ್ಚು ಸಮಯವನ್ನು ಹಾಳು ಮಾಡಿದರೆಂದರೆ ಅಪರಾಧಿಗಳು ಅಲ್ಲಿಂದ ತಪ್ಪಿಸಿಕೊಳ್ಳಲು ಕೊಟ್ಟ ಸಮಯ ಎನ್ನುವುದು ಹಲವರ ಗುಮಾನಿ.

ಈ ಪ್ರಕರಣದ ಭಯಾನಕತೆ ಇನ್ನಷ್ಟು ಹೆಚ್ಚೆಂದು ಮನವರಿಕೆಯಾದದ್ದು ಯುವತಿ ಕೊಟ್ಟ ದೂರು. ಅವಳು ಇದುವರೆಗೆ ಯಾರೊಂದಿಗೂ ಬಾಯಿಬಿಡದೆ ಇದ್ದ ಹಲವು ವರ್ಷಗಳ ಲೈಂಗಿಕ ಶೋಷಣೆಯ ಗಾಥೆ ಎಂದಾಗಲೇ. ಅವಳನ್ನು ಆ ಎಂಟು ಮಂದಿ ಪತ್ರ ಹಾಗೂ ಫೋಟೋಗಳ ಮೂಲಕ

ಬೆದರಿಕೆ ಹಾಕುತ್ತಾ, ಬ್ಲಾಕ್‌ಮೇಲ್ ಮಾಡುತ್ತಾ ಏಳು ವರ್ಷಗಳಿಂದ ಅವಳನ್ನು ಲೈಂಗಿಕವಾಗಿ ಶೋಷಿಸುತ್ತಿದ್ದರು. ಇವರಲ್ಲಿ ಒಬ್ಬನನ್ನು ಬಿಟ್ಟು ಉಳಿದವರೆಲ್ಲಾ ಶ್ರೀಮಂತ ರೈತನ ಮಕ್ಕಳು; ರಾಜಕೀಯ ಸಂಬಂಧ ಹೊಂದಿರುವ ಜಾಟ ಜನಾಂಗದವರು; ಕಾನೂನು ವಿದ್ಯಾರ್ಥಿಗಳು - ಭವಿಷ್ಯದ ವಕೀಲರು, ನ್ಯಾಯಾಧೀಶರು. ಇವರಲ್ಲೊಬ್ಬ ಕಾಂಗ್ರೆಸ್ ಶಾಸಕ ರಿಚ್‌ಪಾಲ್ ಮಿರ್ಧಾ, ಮಾಜಿ ಕೇಂದ್ರ ಮಂತ್ರಿ ನಾಥೂರಾಮ್ ಮಿರ್ಧಾ ಹಾಗೂ ವಿರೋಧ ಪಕ್ಷದ ನಾಯಕ ಪರಶುರಾಂ ಮದರ್ನರ ಸಂಬಂಧಿಕ!

ಜೆ.ಸಿ. ಬೋಸ್ ಹಾಸ್ಟೆಲ್ ಪ್ರಕರಣದ ಹಿಂದಿನ ದಿನ ಅಂದರೆ ಸೆಪ್ಟೆಂಬರ್ 4ರಂದು 37 ವರ್ಷ ವಯಸ್ಸಿನ ಗುಜರಾತಿ ಮಹಿಳೆಯೊಬ್ಬಳು ಜೈನ ಸನ್ಯಾಸಿಯಾಗಲಿರುವ ತನ್ನ ಮಗನನ್ನು ನೋಡಲು ಪಶ್ಚಿಮ ರಾಜಾಸ್ಥಾನದ ಜಾಲೋಲ್ ಜಿಲ್ಲೆಯ ಬೀನ್‌ಮಾಲ್ ಎಂಬ ಊರಿಗೆ ಹೋದಳು. ಮಗನ ಗುರುವಾದ ಲೋಕೇಂದ್ರ ವಿಜಯ್ ಎಂಬ ಜೈನ ಮುನಿಯಿಂದ ಆಶ್ರಮದಲ್ಲೇ ಅತ್ಯಾಚಾರಕ್ಕೊಳಗಾದಳು.

ಈ ಎರಡು ಪ್ರಕರಣಗಳು ಜನತೆಯ ಗಮನ ಸೆಳೆಯುತ್ತಿರುವಾಗಲೇ ಇಂಥ ಹಲವು ಘಟನೆಗಳು ಬೆಳಕಿಗೆ ಬರುತ್ತಿವೆ. ಇನ್ನು ಕೆಲವು ಬೂದಿಮುಚ್ಚಿದ ಕೆಂಡದಂತೆ ಮೌನದಲ್ಲಿ ಮರೆಯಾಗಿವೆ.

ಹೋದ ವರ್ಷ ಜೂನ್ ತಿಂಗಳ ಒಂದು ದಿನ ಸಾರಾಯಿ ಕಂಟ್ರಾಕ್ಟರನೊಬ್ಬನ ಬಾಡಿಗೆ ಗೂಂಡಾಗಳು ಉತರಾಸಾ ಗ್ರಾಮದ ಮೇಲೆ ದಾಳಿ ಮಾಡಿದರು. ಇವರಲ್ಲಿಬ್ಬರು ಪೋಲೀಸರು! ಇವರು ಧಾಪೂಬಾಯಿ, ಅವಳ ಗಂಡ ಮತ್ತು ಮಗನನ್ನು ಅಪಹರಿಸಿದರು. ಗ್ರಾಮದಿಂದ ಹತ್ತು ಕಿ.ಮೀ. ದೂರದಲ್ಲಿ ಧಾಪೂವಿನ ಮೇಲೆ ಎಂಟು ಮಂದಿಯ ಗುಂಪು ಅತ್ಯಾಚಾರ ನಡೆಸಿತು. ಅವಳ ಗರ್ಭಕೋಶವನ್ನೇ ಎಳೆದುಹಾಕುವ ಪ್ರಯತ್ನ ನಡೆಯಿತು. ಅವಳ ಗಂಡ ಮತ್ತು ಮಗನ ಕಾಲುಗಳು ಕಬ್ಬಿಣದ ಸರಳುಗಳ ಹೊಡೆತಕ್ಕೆ ಮುರಿದಿದ್ದವು. ಪೋಲೀಸರಿಬ್ಬರು ಅಮಾನತ್ತುಗೊಂಡರು. 22 ಮಂದಿ ಆಪಾದಿತರಲ್ಲಿ 20 ಮಂದಿ ದಸ್ತಗಿರಿಯಾದರು. ಕಂಟ್ರಾಕ್ಟರನ ಕಡೆಯವರಿಬ್ಬರು ಪಲಾಯನ ಮಾಡಿದರು!

ನಾಗಪುರ ಜಿಲ್ಲೆಯ ದೀದ್ವಾನಾ ಹಳ್ಳಿಯಲ್ಲಿ ಒಬ್ಬ ತಾಯಿ ಮತ್ತು ಮಗಳ ಮೇಲೆ ಅತ್ಯಾಚಾರ ನಡೆಯಿತು. ಆಪಾದಿತರಲ್ಲಿ ಒಬ್ಬ ವಕೀಲರು, ಸ್ಥಳೀಯ ರಾಜಕಾರಣಿಯೊಬ್ಬರು ಹಾಗೂ ಮತ್ತೊಬ್ಬ ಪಟವಾರಿಯ ಇದ್ದರು.

20 ವರ್ಷ ವಯಸ್ಸಿನ ರಾಜು ಮೊದಲ ಬಾರಿಗೆ ಗಂಡನ ಮನೆಗೆ ಹೋದಳು. 50 ವರ್ಷದ ಮೀನಾ ಅವಳ ಮೇಲೆ ಅತ್ಯಾಚಾರ ನಡೆಸಿದ. ಕುಟುಂಬದವರೆಲ್ಲಾ ದೂರು ಕೊಡಲು ಪೋಲೀಸು ಠಾಣೆಗೆ ಹೋದರು. ಆದರೆ ಪ್ರಕರಣ ದಾಖಲಾಗಲಿಲ್ಲ. ಇವಳ ಉಡುಪನ್ನು ಸಾಕ್ಷಿಯಾಗಿ ತೆಗೆದುಕೊಳ್ಳಲಿಲ್ಲ. ಪೋಲೀಸರು ರಾಜುವನ್ನು, ಹಿಂದಿನ ರಾತ್ರಿ ತನ್ನ ಗಂಡನೊಂದಿಗೆ ಲೈಂಗಿಕ ಸಂಪರ್ಕ ಹೊಂದಿದ್ದಳೆ?' ಎಂದು ಕೇಳಿದರು. ಅವಳು 'ಇಲ್ಲ' ಎಂದಳು. ಅವರು 'ಹೌದು' ಎಂದು ಬರೆದುಕೊಂಡರು. ಪ್ರಕರಣ ವಿಚಾರಣೆಗೆ ಮೊದಲೇ ನಾಶವಾಯಿತು. ಕಾರಣ, ಮೀನಾ ಪೋಲೀಸರ ಕೈ ಬೆಚ್ಚಗೆ ಮಾಡಿದ್ದ.

1995ರ ಜೂನ್ ತಿಂಗಳಲ್ಲಿ ಜುಂಜುನು ಜಿಲ್ಲೆಯ ನಾಲ್ಕು ವರ್ಷದ ಮಗು ನಿರ್ಮಲಾ. ತನ್ನ ಮನೆಯ ಹತ್ತಿರದ ಜಮೀನಿನಲ್ಲಿ ಆಡಿಕೊಂಡಿದ್ದ ಇವಳು 53 ವರ್ಷದ ಕಾಮುಕನೊಬ್ಬನ ಧಾಳಿಗೆ ಗುರಿಯಾದಳು. ಆ ಅತ್ಯಾಚಾರಿಯನ್ನು ಮಗು ಎರಡು ಬಾರಿ ಗುರುತಿಸಿತಾದರೂ ಪೋಲೀಸರು ಬಡ ಕುಟುಂಬದ ಚಿಕ್ಕ ಹುಡುಗನೊಬ್ಬನನ್ನು ಬಂಧಿಸಿದರು! ಕಾರಣ ಆಪಾದಿತ ಬಿಜೆಪಿಯ ಸಂಪರ್ಕ ಹೊಂದಿದ್ದ.

ಶಿವಾನಿ ಜಡೆಜಾ ಎಂಬ 11ನೇ ತರಗತಿಯ ವಿದ್ಯಾರ್ಥಿನಿ ಅತ್ಯಾಚಾರಕ್ಕೊಳಗಾದುದಷ್ಟೇ ಅಲ್ಲ, ಆಸಿಡ್ ಧಾಳಿಗೂ ಗುರಿಯಾದಳು. ಅವಳು ಹೆಸರಿಸಿದ ಯಾವ ಆಪಾದಿತನೂ ಬಂಧನಕ್ಕೊಳಗಾಗಲಿಲ್ಲ. ಅವರಲ್ಲೊಬ್ಬ ಮಂತ್ರಿಯ ಮಗನ ಹೆಸರೂ ಇತ್ತು!

ಜುಂಜುನು ಜಿಲ್ಲೆಯ ಜೈಲರನೊಬ್ಬ 17 ವರ್ಷದ ಸುಮನ್ ಜಾಟಳ ಮೇಲೆ ಬಲಾತ್ಕಾರ ನಡೆಸಿದ. ಮಹಿಳೆಯರು ಚಳುವಳಿ ನಡೆಸುವವರೆಗೂ ಅವನನ್ನು ಬಂಧಿಸಲಿಲ್ಲ.

ಸಿಕಾರಿನಲ್ಲಿ ಏಳನೇ ತರಗತಿಯ ವಿದ್ಯಾರ್ಥಿನಿ ಅತ್ಯಾಚಾರಕ್ಕೊಳಗಾದಳು. ಅವಳ ತಂದೆ ಕೊಟ್ಟ ದೂರನ್ನು ಪೋಲೀಸು ಪೇದೆ ಹರಿದು ಹಾಕಿದುದಲ್ಲದೆ ಪ್ರಕರಣವನ್ನು ತಿರುಚಲು ಪ್ರಯತ್ನಿಸಿದ. ಕೊನೆಗೆ ಪೋಲೀಸು ಅಧೀಕ್ಷಕರ ಮೇಲೆ ಒತ್ತಡ ತಂದಾಗಲೇ ಮೊದಲು ತಂದ ದೂರು ದಾಖಲಾಯಿತು.

ಬಿಜೆಪಿಯ ಹಿರಿಯ ಸದಸ್ಯರೊಬ್ಬರು ಶಾಲಿನಿಶರ್ಮ ಆಳ್ವಾರ್ ಲೈಂಗಿಕ ಪ್ರಕರಣದಲ್ಲಿ ಆಪಾದಿತರಾಗಿದ್ದರು. ಮುಖ್ಯಮಂತ್ರಿ ಭೈರನ್‌ಸಿಂಗ್ ಶೆಖಾವತರು ಆ ಶೋಷಿತ ಮಹಿಳೆಯ ಹೇಳಿಕೆಯನ್ನು ಮ್ಯಾಜಿಸ್ಟ್ರೇಟರ ಮುಂದೆ ಪಡೆಯುವುದು ತಡವಾಗುವಂತೆ ನೋಡಿಕೊಂಡರು!

ಸುಮಾರು 40 ವರ್ಷ ವಯಸ್ಸಿನ ಬನವಾರಿದೇವಿ ರಾಜಾಸ್ಥಾನ ಸರಕಾರದ ಮಹಿಳಾ ಅಭಿವೃದ್ಧಿ ಯೋಜನೆಯಲ್ಲಿ ದುಡಿಯುವ ಸಾಥಿನ್. ಅಕಾತೀಜ್ ಎಂಬ ಹಬ್ಬದ ದಿನ ಬಾಲ್ಯ ವಿವಾಹಗಳು ಹೆಚ್ಚಾಗಿ ನಡೆಯುತ್ತಿದ್ದುದನ್ನು ಸರಕಾರಕ್ಕೆ ವರದಿ ಮಾಡಿದಳು. ಮದುವೆಗಳು ನಿಲ್ಲಲಿಲ್ಲ. ಆದರೆ ಇವಳ ದುರಾದೃಷ್ಟ ಆರಂಭವಾಯಿತು. 1992ರ ಸೆಪ್ಟೆಂಬರ್ 22ರಂದು ಗಂಡನೊಂದಿಗೆ ಹೊಲದಲ್ಲಿ ಕೆಲಸ ಮಾಡುತ್ತಿದ್ದ ಇವಳ ಮೇಲೆ ಇಬ್ಬರಿಂದ ಅತ್ಯಾಚಾರ ನಡೆಯಿತು. ಇದು ಹಲ್ಲೆಗೊಳಗಾದ ಗಂಡನ ಕಣ್ಣೆದುರೇ ನಡೆದಿತ್ತು. ಹಳ್ಳಿಯ ಮುಖ್ಯಸ್ಥನಿಗೆ ದೂರಿತ್ತಾಗ ಅವನು ಗುಟ್ಟಾಗಿ ಸಹಾಯ ಮಾಡುವುದಾಗಿ ತಿಳಿಸಿದ. ಡಾಕ್ಟರ ಬಳಿ ಹೋದರೆ ಅವನು ವೈದ್ಯಕೀಯ ಪರೀಕ್ಷೆ ಮಾಡಲು ನಿರಾಕರಿಸಿದ. ಕೊನೆಗೂ ಬಸ್ಸಿಯ ಠಾಣೆಯಲ್ಲಿ ದೂರು ದಾಖಲಾಯಿತು. ಅವಳು ಧರಿಸಿದ್ದ 'ಗರಾರಾ' ವೈದ್ಯಕೀಯ ಪರೀಕ್ಷೆಗೆಂದು ಹೋಯಿತು. ಗಂಡನು ತಂದಿದ್ದ ಹೊದಿಕೆಯಿಂದ ಮೈಮುಚ್ಚಿಕೊಂಡು ಊರಿಗೆ ಹಿಂದಿರುಗಬೇಕಾಯಿತು. ಜಿಲ್ಲಾ ನ್ಯಾಯಾಲಯ ಅಪರಾಧಿಗಳು ವಯಸ್ಸಾದವರಾಗಿದ್ದು ಅತ್ಯಾಚಾರ ಮಾಡಲಾರರೆಂದೂ, ವೀರ್ಯ ಅವರದಲ್ಲವೆಂದೂ ತೀರ್ಪಿತ್ತಿದೆ. ನ್ಯಾಯ ಬಲಿಷ್ಠ ಜನಾಂಗವಾದ ಗುಜ್ಜಾರರ ಪರವಾಗಿದೆ. ಬಿಜೆಪಿ ಶಾಸಕರು 'ಅವಳ ಮೇಲೆ ಅತ್ಯಾಚಾರ ನಡೆದಿಲ್ಲ, ಅವಳು ಸುಳ್ಳು ಹೇಳುತ್ತಿದ್ದಾಳೆ' - ಪ್ರಚಾರಕ್ಕಾಗಿ ಪ್ರಶಸ್ತಿಗಾಗಿ' ಎನ್ನುತ್ತಿದ್ದಾರೆ. ಕಾರಣ ಅವಳಿಗೆ ಮೂರು ವರ್ಷಗಳ ನಂತರ ನೀರಜಾ ಭಾನೋಟ್'ನ ಪ್ರಶಸ್ತಿ ದೊರೆಕಿದೆ.

ಮಹಿಳಾ ಗುಂಪುಗಳಿಂದ ಅತ್ಯಾಚಾರ ವಿರೋಧಿ ಪ್ರತಿಭಟನೆ ನಡೆಯುತ್ತಿರುವಾಗಲೇ ಜೈಪುರದ ಹೋಟೆಲ್ಲುಗಳೆರಡರ ಮೇನೇಜರುಗಳಿಬ್ಬರು ಹುಡುಗಿಯೊಬ್ಬಳ ಮೇಲೆ ಸತತವಾಗಿ ಎರಡು ದಿನಗಳ ಕಾಲ ಅತ್ಯಾಚಾರ ನಡೆಸಿದರು.

ಗೋವಾದ ಹುಡುಗಿಯೊಬ್ಬಳನ್ನು ಗುಂಪೊಂದು ಅಪಹರಿಸಿತು. ಅವಳ ಚೀರಾಟ ಕೇಳಿದ ಜನ ಅವಳನ್ನು ರಕ್ಷಿಸಿದರು.

ಸ್ಕಾಕರ್ಸ್ ಗುಂಪೊಂದು ಜಪಾನಿನ ಮಹಿಳೆಯೊಬ್ಬರ ಮೇಲೆ ಅತ್ಯಾಚಾರ ನಡೆಸುವುದನ್ನು ಕೆಲವು ಶಾಸಕರು ತಪ್ಪಿಸಿದ್ದರು.

ಜನನಿಬಿಡ ಮಾರ್ಕೆಟ್ಟಿನಲ್ಲಿ ತನ್ನ ತಾಯಿಯೊಂದಿಗೆ ವ್ಯಾಪಾರ ಮಾಡುತ್ತಿದ್ದ ಶಾಲಾವಯಸ್ಸಿನ ಹುಡುಗಿಯೊಬ್ಬಳ ಲಂಗವನ್ನು ಸ್ಕೂಟರಿನಲ್ಲಿ ಬಂದ ಇಬ್ಬರು ಹಿಡಿದೆಳೆದರು. ಹುಡುಗಿ ಅವಮಾನದಿಂದ ಕುಗ್ಗಿಹೋದಳು. ಆದರೆ ಅಪರಾಧಿಗಳನ್ನು ಹಿಡಿಯಲು ಯಾರೂ ಮುಂದಾಗಲಿಲ್ಲ.

ಗೌರವಾನ್ವಿತ ಸಮಾಜ ಕಾರ್ಯಕರ್ತೆಯೊಬ್ಬರಿಗೆ ಕಛೇರಿ ವೇಳೆಯಲ್ಲಿ ಟೆಲಿಫೋನ್ ಕರೆಯೊಂದು ಬಂತು. ಅದು ಅಶ್ಲೀಲವಾದ ಲೈಂಗಿಕ ಕರೆ. ದಿಗ್ಭ್ರಮೆಗೊಂಡ ಅವರು ತಮ್ಮ ಮಹಿಳಾ ಸಹೋದ್ಯೋಗಿಗಳನ್ನೆಲ್ಲಾ ಒಂದೆಡೆ ಸೇರಿಸಿ ತಮಗೆ ಬಂದ ಕರೆಯ ಬಗ್ಗೆ ತಿಳಿಸಿದರು. ಅವರಿಗೂ ಅಂಥದೇ ಅನುಭವ ಆಗುತ್ತಿದೆಯೆ ಎಂದು ತಿಳಿಯಬಯಸಿದರು.

ಮೇಲೆ ಹೇಳಿದ ಮೂರೂ ಘಟನೆಗಳು ಜೈಪುರದಲ್ಲಿ ಒಂದೇ ತಿಂಗಳಲ್ಲಿ ನಡೆದಿರುವುದು ಬೆಳಕಿಗೆ ಬಂದಿದೆ.

ಜೆ.ಸಿ. ಬೋಸ್ ಹಾಸ್ಟೆಲ್ ಪ್ರಕರಣ ರಾಜಾಸ್ಥಾನದ ಜನತೆಯ ಗಮನ ಸೆಳೆದಿದೆ. ಇದಕ್ಕೆ ಮೊದಲು ನಡೆದ ಬನವಾರಿಯ ಪ್ರಕರಣ ಜನರ ನೆನಪಿನಲ್ಲಿತ್ತಾದರೂ, ಜ್ಞಾನಾರ್ಜನೆಯ ಪ್ರಸಿದ್ಧ ಕೇಂದ್ರವೊಂದರಲ್ಲಿ ನಡೆದಿರುವ ಹಾಗೂ ಆ ಯುವತಿ ಪ್ರಗತಿಪರ ಲೇಖಕರೊಬ್ಬರ ಮಗಳು ಎಂಬ ಕಾರಣಕ್ಕಾಗಿಯೂ ಇದು ಜನರ ಮನೆಮಾತಾಗಿದೆ.

ಬನವಾರಿಯ ಪ್ರಕರಣದ ನಂತರ 1996ರಲ್ಲಿ ಮಹಿಳಾ ಸಂಘಟನೆಗಳು ರಚಿಸಿಕೊಂಡಿದ್ದ 'ಮಹಿಳಾ ಅತ್ಯಾಚಾರ ವಿರೋಧೀ ಸಮಿತಿ' ಸೆಪ್ಟೆಂಬರ್ 13ರಿಂದ ಅಕ್ಟೋಬರ್ 11ರವರೆಗೆ 28 ದಿನಗಳ ಕಾಲ ಬಲಾತ್ಕಾರ ವಿರೋಧೀ ಆಂದೋಲನವನ್ನು ಹಮ್ಮಿಕೊಂಡಿತು. ಪ್ರಸಿದ್ಧವಾದ ಹವಾಮಹಲಿನಿಂದ ಸ್ವಲ್ಪ ದೂರವಿರುವ ಜೈಪುರದ ಬರೀ ಚೋಪಡಿಯಲ್ಲಿ ನಡೆದ ಧರಣಿಯಲ್ಲಿ ರಾಜಕಾರಣಿಗಳು, ಕಲಾವಿದರು, ಡಾಕ್ಟರುಗಳು, ನ್ಯಾಯವಾದಿಗಳು, ಎಲ್ಲಕ್ಕಿಂತ ಹೆಚ್ಚಾಗಿ ಸಾರ್ವಜನಿಕರು ಭಾಗವಹಿಸಿದರು. ಅಪಹೃತಳಾಗಿ ನಂತರ ಅತ್ಯಾಚಾರಕ್ಕೊಳಗಾದ ತನ್ನ ಮೂರು ವರ್ಷದ ಮಗಳನ್ನು ಕರೆತಂದಿದ್ದ ವ್ಯಕ್ತಿಯೊಬ್ಬರು ಭಾಗವಹಿಸಿದ್ದರು; ನ್ಯಾಯಕ್ಕಾಗಿ ಹೇಗೆ ಹೋರಾಡಬೇಕೆಂದು ತಿಳಿಯಬಯಸಿದ್ದರು! ಇಂಥಹದೇ ಕಥೆಗಳು ದಿನಕ್ಕೊಂದು ಕೇಳಿ ಬರುತ್ತಿತ್ತು. ಜನರು ಈ ಬಗ್ಗೆ ಧೈರ್ಯದಿಂದ ಮಾತಾಡ ತೊಡಗಿದ್ದರು.

"ನಾನೊಬ್ಬ ವೇಶ್ಯೆ. ನಾನು ಅನೇಕ ಪುರುಷರೊಂದಿಗೆ ಮಲಗುತ್ತೇನೆ. ಏನಾಯಿತು? ಅದು ನನ್ನ ವೃತ್ತಿ. ಹಾಗೆಂದು ಅದು ನನ್ನ ಮೇಲೆ ಯಾರು ಬೇಕಾದರೂ ಅತ್ಯಾಚಾರ ಮಾಡುವ ಹಕ್ಕನ್ನು ನೀಡುವುದಿಲ್ಲ. ನನ್ನ ನಡತೆಯನ್ನು ಪ್ರಶ್ನಿಸುವ ಪುರುಷರಾದ ನಿಮ್ಮ ನಡತೆ ಎಂಥಹದು? ಒಬ್ಬ ಹುಡುಗಿಯ ಮೇಲೆ ಅತ್ಯಾಚಾರ ಮಾಡಲು 'ಕ್ಯೂ'ನಲ್ಲಿ ನಿಲ್ಲುವ ನಾಲ್ಕು ಹುಡುಗರು ಹಾಗೂ ಅತ್ಯಾಚಾರ ಮಾಡುತ್ತಿರುವ ಐದನೆಯವನ ನಡತೆ ಎಂಥದು?" ಎಂದು ತುಂಬಿದ ಸಭೆಯಲ್ಲಿ ಯುವತಿ ಯೊಬ್ಬಳು ಕೇಳುತ್ತಿದ್ದಳು.

ಜೆ.ಸಿ. ಬೋಸ್ ಪ್ರಕರಣ ಹಾಗೂ ಬೀನ್‌ಮಾಲ್ ಪ್ರಕರಣಗಳಲ್ಲಿ ಆಪಾದಿತರನ್ನು ಜನಾಂಗೀಯ ಹಾಗೂ ರಾಜಕೀಯ ಆಸಕ್ತಿಗಳು ರಕ್ಷಿಸಿದ ರೀತಿ ರಾಜ್ಯದ ಪ್ರಗತಿಪರ ಹಾಗೂ ಮಹಿಳಾ ಗುಂಪುಗಳನ್ನಲ್ಲದೆ ಸಾರ್ವಜನಿಕರನ್ನು ರೊಚ್ಚಿಗೆಬ್ಬಿಸಿತ್ತು. ಈ ಚಳುವಳಿಗೆ ಮುನ್ನ ಜೈಪುರ ಬಂದ್ ನಡೆದಾಗ ರಾಷ್ಟ್ರೀಯ ಮಹಿಳಾ ಆಯೋಗ ಈ ಘಟನೆಯ ಬಗ್ಗೆ ಸರಕಾರ ಮತ್ತು ಪೋಲೀಸು ಇಲಾಖೆ ಮುಂದುವರೆ ಯುತ್ತಿರುವ ರೀತಿಯನ್ನು ತಿಳಿದುಕೊಳ್ಳಲು ತಂಡವೊಂದನ್ನು ಕಳಿಸಿತ್ತು. ಈ ತಂಡ ಅಕ್ಟೋಬರ್ 14 ಮತ್ತು 15ರಂದು ಹೇಳಿಕೆಗಳನ್ನು ಪಡೆಯಿತು. ಆಗ ತಿಳಿದು ಬಂದ ಅಂಶಗಳೆಂದರೆ, ಗುಂಪು ಅತ್ಯಾಚಾರದಲ್ಲಿ ಹೆಸರಿಸಲಾಗಿದ್ದ ಎಂಟು ಮಂದಿಯಲ್ಲಿ ಆರು ಮಂದಿಯನ್ನು ಗುರುತಿಸಿ ದಸ್ತಗಿರಿ ಮಾಡಲಾಗಿತ್ತು. ಆದರೆ ಅದೇ ಯುವತಿಯನ್ನು ಏಳು ವರ್ಷಗಳವರೆಗೆ ಲೈಂಗಿಕವಾಗಿ ಶೋಷಿಸಿದ್ದರೆಂದು ಹೆಸರಿಸಿದ್ದ ಹನ್ನೊಂದು ಮಂದಿಯಲ್ಲಿ ಒಬ್ಬರನ್ನೂ ಬಂಧಿಸಿರಲಿಲ್ಲ. ಅವರಲ್ಲೊಬ್ಬರು ಪ್ರಸಿದ್ಧ ವಕೀಲರು, ಕೈಗಾರಿಕಾ ಇಲಾಖೆಯ ಸಹಾಯಕ ನಿರ್ದೇಶಕರೊಬ್ಬರು ಹಾಗೂ ಪೋಲೀಸು ಸಹಾಯಕ ಅಧೀಕ್ಷಕರೊಬ್ಬರಿದ್ದರು. ಆಯೋಗವು ಹೇಳಿಕೆಗಳನ್ನು ಪಡೆದ ದಿನವೇ ಪೋಲೀಸರು ಆ ವಕೀಲನನ್ನು ಹಾಗೂ ಹಗರಣದಲ್ಲಿ ಭಾಗಿಯಾಗಿದ್ದಳೆನ್ನಲಾದ ಇನ್ನೊಬ್ಬ ಮಹಿಳೆಯನ್ನು ಬಂಧಿಸಿದರು. ಈ ತನಿಖೆಯಲ್ಲಿ ಅತ್ಯಾಚಾರಕ್ಕೊಳಗಾದ ಯುವತಿಯಲ್ಲದೆ ಇನ್ನೂ ಹಲವು ಮಂದಿ ಯುವತಿಯರು ಈ ಜಾಲದ ಬಲಿಪಶುಗಳು ಎಂದು ತಿಳಿದು ಬಂತು.

ಈ ಸಂಬಂಧವಾದ ಮೊದಲ ಎಚ್ಚರಿಕೆಯ ಗಂಟೆ ಹೊಡೆದದ್ದು 1992ರಲ್ಲಿ. ಅಜ್ಮೀರದಲ್ಲಿ ಪುರುಷರ ಒಂದು ವರ್ತುಲ ಮಧ್ಯಮ ವರ್ಗದ ಕುಟುಂಬದ ಅನೇಕ ಹುಡುಗಿಯರನ್ನು ಲೈಂಗಿಕವಾಗಿ ಶೋಷಿಸುತ್ತಿದೆಯೆಂದು ಪತ್ರಿಕೆಗಳಲ್ಲಿ ವರದಿಯಾಗಿತ್ತು. ಅದು ಹೇಗೆಂದರೆ, ಮೊದಲಿಗೆ ಹುಡುಗಿಯರೊಂದಿಗೆ ಗೆಳೆತನ ಬೆಳೆಸಿಕೊಳ್ಳಲಾಗುತ್ತಿತ್ತು. ಇವರಲ್ಲಿ ಹೆಚ್ಚಿನವರು 16ರಿಂದ 19 ವರ್ಷ ವಯೋಗುಂಪಿನ ವರಾಗಿರುತ್ತಿದ್ದರು. ಇವರನ್ನು ತೋಟದ ಮನೆಗಳಿಗೆ ಕರೆದೊಯ್ದು ಬಲಾತ್ಕಾರ ನಡೆಸಲಾಗುತ್ತಿತ್ತು. ಇದರ ಫೋಟೋಗಳನ್ನು ತೋರಿಸಿ ಅವರನ್ನು ಮತ್ತೆ ಮತ್ತೆ ಲೈಂಗಿಕವಾಗಿ ಬಳಸಿಕೊಳ್ಳಲಾಗುತ್ತಿತ್ತಷ್ಟೇ ಅಲ್ಲ, ಅವರ ಗೆಳತಿಯರನ್ನು ಇಂಥ ಜಾಲಕ್ಕೆ ಸಿಲುಕಿಸುವಂತೆ ಒತ್ತಡ ತರಲಾಗುತ್ತಿತ್ತು.

ಈ ಜಾಲ ಪೋಲೀಸರ ಗಮನಕ್ಕೆ ಬಂದುದು ಹೀಗೆ. 1992ರ ಏಪ್ರಿಲ್ 7ರಂದು ಸ್ಥಳೀಯ ವಕೀಲರು ಹಾಗೂ ಬಿಜೆಪಿ ನಗರ ಪಾಲಿಕೆ ಸದಸ್ಯರಾದ ವೀರಕುಮಾರ್ ಪೋಲೀಸು ಅಧೀಕ್ಷಕರ ಬಳಿ ಕೆಲವು ಫೋಟೋ ಪ್ರತಿಗಳನ್ನು ತಂದು ತೋರಿಸಿದರು. ಆದರೆ ಈ ಬಗ್ಗೆ ಪತ್ರಿಕೆಗಳಲ್ಲಿ ವರದಿ ಯಾಗುವವರೆಗೂ ಅಪರಾಧಿಗಳನ್ನು ಹಿಡಿಯುವ ಪ್ರಯತ್ನ ನಡೆಯಲಿಲ್ಲ. ಮೇ ತಿಂಗಳ ಕೊನೆಯಲ್ಲಿ ವಕೀಲರ ಸಂಘ ಮೆರವಣಿಗೆಯೊಂದನ್ನು ನಡೆಸಿದ ಕೂಡಲೆ ಅಪರಾಧಿಗಳ ಬಂಧನ, ಪ್ರಕರಣ ದಾಖಲಾತಿಗಳೆರಡೂ ನಡೆದವು!

ಫೋಟೋಗಳ ಮೂಲಕ ಗುರುತಿಸಲಾದ ಹದಿನಾರು ಮಂದಿ ಅಪರಾಧಿಗಳಲ್ಲಿ ಐದು ಮಂದಿ ಇಂದಿಗೂ ದಸ್ತಗಿರಿಯಾಗಿಲ್ಲ. ಇವರಲ್ಲೊಬ್ಬ ಆತ್ಮಹತ್ಯೆ ಮಾಡಿಕೊಂಡಿದ್ದರೆ ಇನ್ನೊಬ್ಬ ಜಾಮೀನು ಪಡೆದ ನಂತರ ಕಾಣೆಯಾಗಿದ್ದಾನೆ. ಹುಡುಗಿಯರನ್ನು ಬ್ಲಾಕ್‌ಮೇಲ್ ಮಾಡಲು ಬಳಸುತ್ತಿದ್ದ ಫೋಟೋಗಳ ಮೂಲಪ್ರತಿಗಳು ಇನ್ನೂ ಪೋಲೀಸರ ಕೈಸೇರಿಲ್ಲದೆ ದಸ್ತಗಿರಿಯಾಗದೆ ಉಳಿದ ಅಪರಾಧಿಗಳ ಬಳಿ ಇರಬಹುದು. ಆದ್ದರಿಂದಲೇ ಮೊದಲು ದೂರು ಕೊಡಲು ಮುಂದಾಗಿ ನಂತರ ಹಿಂಜರಿದ, ಹತಾಶೆಗೊಳಗಾದ ಹುಡುಗಿಯರು ಇನ್ನೂ ಬ್ಲಾಕ್‌ಮೇಲ್‌ಗೊಳಗಾಗುತ್ತಿರಬಹುದಾದ ಸಾಧ್ಯತೆಗಳಿವೆ ಯೆನ್ನಲಾಗಿದೆ.

ಇದಿಷ್ಟೇ ಅಲ್ಲ, ಹಗರಣಕ್ಕೆ ಸಂಬಂಧಿಸಿದ ಮುಖ್ಯ ಸಾಕ್ಷಿಗಳನ್ನೂ ನಾಶಪಡಿಸಲಾಗಿದೆ. 'ದೈನಿಕ ನವಜ್ಯೋತಿ'ಯ ಪ್ರಶಸ್ತಿ ವಿಜೇತ ಪತ್ರಕರ್ತ ಸಂತೋಷ್ ಗುಪ್ತಾ ಹೇಳುವಂತೆ, ಹುಡುಗಿಯರ ಹೆಸರು ಹೊರಬರದಂತೆ ನೋಡಿಕೊಳ್ಳಲು ಫೋಟೋಗಳನ್ನು ಆತುರದಿಂದ ನಾಶಮಾಡಿದ್ದಾರೆ. ಇದರೊಂದಿಗೆ ಅಪರಾಧಿಗಳನ್ನು ಸುಲಭವಾಗಿ ಪತ್ತೆಹಚ್ಚಲು ನೆರವಾಗಬಹುದಾದ ಮಾಹಿತಿಗಳನ್ನೂ ನಾಶಮಾಡಿಕೊಂಡಿದ್ದಾರೆ.

ಸಂತೋಷಗುಪ್ತಾರವರೇ ಬೆಳಕಿಗೆ ತಂದಿರುವ ಈ ಹಗರಣದ ವಿಚಾರಣೆ ಐದು ವರ್ಷಗಳ ನಂತರ ಕ್ಯಾಮರಾ ಮೂಲಕ ಮಾತ್ರ ನಡೆದು ಪತ್ರಿಕೆಗಳಲ್ಲಿ ಒಂದು ಪದವನ್ನೂ ಬರೆಯುವಂತಿಲ್ಲ ವಾಗಿದೆ. ಗುಪ್ತಾರವರು ಕೆಲವು ಮೂಲಗಳಿಂದ ಸಂಗ್ರಹಿಸಿರುವಂತೆ, ಸುಮಾರು ಮೂವತ್ತು ಹುಡುಗಿಯರು ಈ ಜಾಲದಲ್ಲಿ ಸಿಕ್ಕಿಬಿದ್ದಿರುವರಾದರೂ ಕೇವಲ ಹನ್ನೆರಡು ಮಂದಿ ಹುಡುಗಿಯರು ಪೋಲೀಸರಿಗೆ ದೂರು ನೀಡಿದ್ದಾರೆ. ಇವರಲ್ಲಿಬ್ಬರು ಹತಾಶೆಗೊಳಗಾಗಿದ್ದಾರೆ. ಮೊದಲ ಬಾರಿಗೆ ಈ ಜಾಲದ ಬಗ್ಗೆ ಪತ್ರಿಕೆಗಳಲ್ಲಿ ಬಂದಾಗ ಹಾಗೂ ಪೋಲೀಸು ತನಿಖೆ ಆರಂಭವಾಗುವ ನಡುವಿನ ಅವಧಿಯಲ್ಲಿ ಘಟಿಸಿದ ಹಲವು ಯುವತಿಯರ ಆತ್ಮಹತ್ಯೆಗೆ ವಿವರಣೆ ಇಂದಿಗೂ ಸಿಕ್ಕಿಲ್ಲ.

ಇಬ್ಬರ್‍ಯಾರೂ ತಮ್ಮ ಆತ್ಮಹತ್ಯೆಗೆ ಕಾರಣ ತಿಳಿಸಿಲ್ಲ ಅಥವಾ ಯಾವುದೇ ಕಾರಣವನ್ನೂ ಊಹಿಸಲಾಗಿಲ್ಲ.

ಅಜ್ಮೇರಿನ ಕಥೆಯ ಭಯಾನಕತೆ ಈ ಶೋಷಣೆಯ ಈ ವ್ಯವಸ್ಥಿತ ರೂಪವಷ್ಟೇ ಅಲ್ಲ, ಅದರ ಬಗೆಗಿನ ಸಾರ್ವಜನಿಕ ಮೌನದ ಮುಂದುವರಿಕೆ ಎನ್ನುವುದು ಪತ್ರಕರ್ತೆಯೊಬ್ಬರ ಅಭಿಪ್ರಾಯ. ಇದು ಸತ್ಯವೂ ಹೌದು. ಈ ಪ್ರಕರಣದಲ್ಲಿ ಯಾವುದೇ ಗುಂಪು ಅಥವಾ ಮಾನವ ಹಕ್ಕುಗಳಿಗಾಗಿ ಹೋರಾಡುವ ಸಂಘ ಸಂಸ್ಥೆ ಈ ಜಾಲದ ತನಿಖೆಯ ಬಗ್ಗೆ ಆಸಕ್ತಿ ವಹಿಸಿಲ್ಲ ಎನ್ನುವುದು ಆತಂಕಕಾರಿ ಸಂಗತಿ. ಪತ್ರಿಕೆಗಳಲ್ಲಿ ಬಂದ ತನಿಖಾ ವರದಿ ಇದನ್ನು ಅಶ್ಲೀಲತಾ ಹಗರಣ ಎಂದು ಹೇಳುವ ಮೂಲಕ ಅತ್ಯಾಚಾರ ಎಂದು ಹೇಳಲು ಹಿಂಜರಿದಿರುವುದು ಸ್ಪಷ್ಟವಾಗಿತ್ತು.

ಭೌತಶಾಸ್ತ್ರ ವಿಭಾಗದ ಪ್ರೊಫೆಸರ್ ಕೆ. ಬಿ. ಗರ್ಗ್ ಜೆ. ಸಿ. ಬೋಸ್ ಹಾಸ್ಟೆಲ್ಲಿನ ವಾರ್ಡನ್ನರೂ ಹೌದು. ಇವರ ಪ್ರಕಾರ, ಬ್ಲಾಕ್‌ಮೇಲ್, ಗುಂಪು ಅತ್ಯಾಚಾರ ವಿಶ್ವವಿದ್ಯಾನಿಲಯದ ಆವರಣಧಲ್ಲಿ ಸರ್ವೇಸಾಮಾನ್ಯ. ಇದಕ್ಕೆ ಕಾರಣ, ಗ್ರಾಮೀಣ ಅಭಿವೃದ್ಧಿಗಾಗಿರುವ ಹಣ: ಕೆಲವು ಜಾತಿ ಗುಂಪುಗಳಿಗೆ ದೊರಕಿ. ದಿಢೀರ್ ಶ್ರೀಮಂತರಾದ ವರ್ಗಗಳು ಹುಟ್ಟಿಕೊಂಡಿವೆ. ಇಂಥ ಶ್ರೀಮಂತರ ಮಕ್ಕಳು ಜೈಪುರ ಮತ್ತಿತರ ವಿಶ್ವವಿದ್ಯಾನಿಲಯಕ್ಕೆ ಬರುತ್ತಾರೆ. ಬರುವುದು ಓದಲಿಕ್ಕಲ್ಲ, ಮಜವಾಗಿ ಕಾಲ ಕಳೆಯಲಿಕ್ಕೆ; ಚುನಾವಣೆಯಲ್ಲಿ ಸ್ಪರ್ಧಿಸಲಿಕ್ಕೆ. ಇವೆಲ್ಲಾ ರಾಜಕೀಯದ ಮೊದಲ ಮೆಟ್ಟಿಲುಗಳು,

ಈ ಆವರಣದಲ್ಲಿರುವ ಜಾತಿ ಆಧಾರಿತ ವಸತಿ ನಿಲಯಗಳು ಗ್ರಾಮೀಣ ಪ್ರದೇಶದ ನವಶ್ರೀಮಂತರ ಮಕ್ಕಳಿಗೆ ಸ್ಥಳಾವಕಾಶ ನೀಡುತ್ತವೆ. ಚಳುವಳಿ ನಿರತ ವ್ಯಕ್ತಿಯೊಬ್ಬರ ಅಭಿಪ್ರಾಯದಲ್ಲಿ, ಇವರಲ್ಲಿ ಶೇ. 90ರಷ್ಟು ವಿದ್ಯಾರ್ಥಿಗಳು ಅಪರಾಧಿಗಳು. ಈ ಅಪರಾಧಗಳೆಲ್ಲಾ ಮಹಿಳೆಯರ ವಿರುದ್ಧವಾದುವುಗಳೇ. ಹೆಣ್ಣು ಮಕ್ಕಳು ವಿಶ್ವವಿದ್ಯಾನಿಲಯ ಆವರಣದಲ್ಲಿ ಒಂದೇ ಬೀದಿಯಲ್ಲಿ ನಡೆಯಲು ಭಯಪಡುತ್ತಾರೆ. ಕಾರಣ, ಇಲ್ಲಿ ಪ್ರತಿಯೊಬ್ಬ ಮಹಿಳೆಯೂ ಅವರ ಗುರಿಯಾಗಿರುತ್ತಾಳೆ ಎನ್ನುವುದು ಮತ್ತೊಬ್ಬ ಪತ್ರಕರ್ತರಾದ ಯಶವಂತ ವ್ಯಾಸರ ಅನಿಸಿಕೆ.

ಗಂಗಾನಗರ ಪ್ರದೇಶದ ಫಲವತ್ತತೆ ನವಶ್ರೀಮಂತರ ಉದಯಕ್ಕೆ ಕಾರಣವಾದರೆ, ದೂರಸಂಪರ್ಕ, ರೈಲ್ವೆ ಸಂಪರ್ಕ ಮತ್ತು ಕೇಬಲ್ ಟಿ.ವಿ.ಗಳ ಮೇಲುಗೈ ಇಂಥ ಅಪರಾಧಗಳಿಗೆ ಮುಖ್ಯ ಕಾರಣಗಳೆನ್ನಲಾಗಿದೆ. ನವಶ್ರೀಮಂತರು ತಮ್ಮ ಮಕ್ಕಳಿಗೆ ಸುಮೊ, ಮಾರುತಿಯಂಥ ವಾಹನಗಳನ್ನು, ಪಾಕೆಟ್ ಹಣವನ್ನು ನೀಡಿ ಮಕ್ಕಳನ್ನು ಮುದ್ದು ಮಾಡಿ, ಹಾಳು ಮಾಡಿದರೆ, ದೂರದರ್ಶನ ಯುವಕರಿಗೆ ಭಯಂಕರ ವಿಚಾರಗಳನ್ನು ನೀಡುತ್ತವೆ ರೈಲ್ವೆ ಸಂಪರ್ಕಗಳು ಅಪರಾಧಿಗಳು ತಪ್ಪಿಸಿಕೊಳ್ಳಲು ನೆರವಾಗುತ್ತವೆ.

ರಾಜಾಸ್ಥಾನ ವಿಶ್ವವಿದ್ಯಾಲಯದ ಇತಿಹಾಸದ ಪ್ರೊಫೆಸರ್ ರಾಜೇಂದ್ರ ಜೋಷಿ ಹೇಳುವಂತೆ, ಸಮುದಾಯದಲ್ಲಿ ಹಾಗೂ ಕುಟುಂಬದಲ್ಲಿ ಹಿಂದಿದ್ದ ಸುಬಂಧದ ಬಂಧ ಇಂದು ಮಾಯವಾಗಿ ಶೂನ್ಯ ಮಾತ್ರ ಮನೆ ಮಾಡಿದೆ. ಸಮಸ್ಯೆ ಹುಟ್ಟಿರುವುದು ಇಲ್ಲಿಯೇ. ಪೋಷಕರಿಗೆ ಮಕ್ಕಳಿಗಾಗಿ ವಿನಿಯೋಗಿಸಲು ಸಮಯದ ಕೊರತೆ. ಮಕ್ಕಳ ಕಲಿಕೆ ನಡೆಯುವುದೆಲ್ಲಾ ಮಾಧ್ಯಮಗಳಿಂದ. ಎಲ್ಲಾ ರೀತಿಯ ಆಮಿಶಗಳ ಬಲಿಪಶುಗಳಾಗಿದ್ದಾರೆ. ಇದೇ ಸಂದರ್ಭದಲ್ಲಿ ಗಂಡುಹೆಣ್ಣುಗಳ ಮುಕ್ತ ಭೇಟಿಯನ್ನು ಸಮಾಜ ಇಂದಿಗೂ ಒಪ್ಪದಿರುವ ಕಾರಣದಿಂದ ಸಹಜ ನಡವಳಿಕೆಗಳಿಗೂ ವಿಚಿತ್ರವಾಗಿ ಕಾಣುತ್ತವೆ; ಇಲ್ಲಾ ಕತ್ತಲೆಗೆ ಸರಿದುಬಿಡುತ್ತವೆ.

"ವಿವಿಧ ಕ್ಷೇತ್ರಗಳಲ್ಲಿನ ಇಂದಿನ ಬೆಳವಣಿಗೆ ಹೆಣ್ಣು ಮಕ್ಕಳಿಗೆ ಸ್ವಾತಂತ್ರ್ಯ ತಂದಿದೆಯಾದರೂ ಕುಟುಂಬದಲ್ಲಿ ಮುಕ್ತತೆ ತಂದಿಲ್ಲ. ಇದರಿಂದಾಗಿ ಅತ್ಯಾಚಾರ, ಬೆದರಿಕೆ ಮುಂತಾದವುಗಳ ಬಗ್ಗೆ ತಂದೆತಾಯಿಯರಿಗೆ ಹೆಣ್ಣು ಮಕ್ಕಳು ತಿಳಿಸುವುದಿಲ್ಲ. ಇದು ಅವರು ಮತ್ತೆ ಮತ್ತೆ ಶೋಷಣೆಗೊಳಗಾಗಲು ಸಹಾಯಕವಾಗುತ್ತದೆ. ಈಗ ನೈತಿಕತೆ ಹೆಣ್ಣು ಮಕ್ಕಳಿಗೆ ಮಾತ್ರ, ಗಂಡು ಮಕ್ಕಳಿಗಲ್ಲ" ಎನ್ನುತ್ತಾರೆ ಪ್ರೊ. ಗರ್ಗ್.

ಅಜ್ಮೇರ್ ಮತ್ತು ಜೈಪುರ ಪ್ರಕರಣಗಳಲ್ಲಿ ಮಧ್ಯಮ ವರ್ಗದ ಕುಟುಂಬಗಳೇ ಸಿಕ್ಕಿಕೊಂಡಿರುವುದು ಪೀಳಿಗೆಯಿಂದ ಪೀಳಿಗೆಗಿರುವ ಸಂಪರ್ಕದ ಅಂತರವಷ್ಟೇ ಅಲ್ಲದೆ ಸಂಪ್ರದಾಯಗಳು ಮತ್ತು ಆಧುನಿಕತೆಯ ನಡುವಿನ ತಿಕ್ಕಾಟದ ದ್ಯೋತಕ; ಇದು ಗಂಡಿಗೊಂದು ಮೌಲ್ಯ, ಹೆಣ್ಣಿಗೊಂದು ಮೌಲ್ಯ ಎಂಬ ದ್ವಿಮುಖ ನೀತಿಯ ಸಾಮಾಜಿಕ ನೆಲೆಗಟ್ಟಿನ ಪರಿಣಾಮದ ಕರಾಳ ಮುಖವೂ ಹೌದು.

ಜನ ಗಾಭರಿಗೊಂಡಿರುವುದು ಮಹಿಳೆಯರ ಮೇಲಿನ ಅಪರಾಧಗಳು ಹೆಚ್ಚುತ್ತಿವೆ ಎನ್ನುವುದಕ್ಕಿಂತ ಅಪರಾಧಗಳ ಬದಲಾಗುತ್ತಿರುವ ಸ್ವರೂಪದಿಂದ ಎನ್ನಲಾಗಿದೆ. "ಮಹಿಳೆಯರು ಸದಾ ಅತ್ಯಾಚಾರಕ್ಕೊಳಗಾಗುತ್ತಲೇ ಬಂದಿದ್ದಾರೆ. ಆದರೆ ಇದು ವ್ಯವಸ್ಥಿತವಾಗಿ ನಡೆಯುತ್ತಿರುವುದೇ ಖೇದಕರ. ಇಂದು ಮಹಿಳೆಯರನ್ನು ಬೆದರಿಸಿ ಬ್ಲಾಕ್‌ಮೇಲ್ ಮಾಡಲಾಗುತ್ತಿದೆ. ಹಿಂದೆ ಹೀಗಾಗುತ್ತಿರಲಿಲ್ಲ" ಎನ್ನುತ್ತಾರೆ ಫೋರಂ ಎಗೆನೆಸ್ಟ್ ವಾಯಲೆನ್ಸ್ ಆನ್ ವುಮೆನ್ ವೇದಿಕೆಯ ಕವಿತಾ ಶ್ರೀವಾಸ್ತವ.

ಇಂಥ ಸಾಮಾಜಿಕ ಕ್ಲಿಷ್ಟ ಪರಿಸ್ಥಿತಿಯಲ್ಲಿ ಸರಕಾರ ಕೂಡ ಪಾರ್ಶ್ವವಾಯು ಬಡಿದಂತಿದೆ. ಜೆ.ಸಿ. ಬೋಸ್ ಹಾಸ್ಟೆಲ್ ಮತ್ತು ಬೀನ್‌ಮಾಲಾ ಪ್ರಕರಣಗಳಲ್ಲಿ ಧರ್ಮ, ಜಾತಿ ಸಮಾಂಗವೊಂದರ ರಾಜಕೀಯ ಮತ್ತು ಆರ್ಥಿಕ ಸಾಮರ್ಥ್ಯ ಮುಂತಾದ ಹಲವು ಪದರಗಳು ಮುಸುಕಿರುವುದು ಕಂಡುಬರುತ್ತದೆ. ಸರಕಾರದ ಧೋರಣೆಯಲ್ಲಿ ಕಾಳಜಿ, ಕಳಕಳಿಗೆ ಬದಲಾಗಿ ಪ್ರಬಲ ಜಾತಿಗಳ ಹಾಗೂ ಧಾರ್ಮಿಕ ಗುಂಪುಗಳ ಒತ್ತಡಗಳಿಗೆ ಅದು ಮಣಿದಿರುವುದು ಕಾಣಬರುತ್ತದೆ. ಇಲ್ಲಿನ ಅಧ್ಯಯನ ಸಂಸ್ಥೆಯ ಪ್ರೊ. ಪಿ. ಎಸ್. ವ್ಯಾಸರು ಯಾವುದೇ ಸರಕಾರ ತನ್ನ ಉಳಿವಿಗಾಗಿ ಪರಾವಲಂಬನೆ ಹೊಂದಿರುವಾಗ ಇತರರನ್ನು ಎದುರು ಹಾಕಿಕೊಳ್ಳುವ ಧೈರ್ಯ ಮಾಡುವುದಿಲ್ಲ. ಉದಾಹರಣೆಗೆ, ಜಲ್ಲೋರಿನ ಪ್ರಕರಣದಲ್ಲಿ 'ಜೈನಮುನಿ ಲೋಕೇಂದ್ರ ವಿಜಯನನ್ನು ವಿಚಾರಣೆಗೆಂದು ಪೋಲೀಸ್ ಠಾಣೆಗೆ ಕರೆಸಿಕೊಂಡ ಪೋಲೀಸ್ ಸೂಪರಿಂಟೆಂಡೆಂಟರನ್ನು 'ಜನರ ಭಾವನೆಗೆ ಸ್ಪಂದಿಸದವನು' ಎಂದ ಕಾರಣವೊಡ್ಡಿ ಅಮಾನತ್ತುಗೊಳಿಸಿದ ಸರಕಾರಕ್ಕೆ ಸಾವಿರಾರು ಮಂದಿ ಆದೇ ಅಧಿಕಾರಿಯ ಪರವಾಗಿ ನಡೆಸಿದ ಮೆರವಣಿಗೆಗೆ ಸ್ಪಂದಿಸುವುದು ಬೇಡವಾಗಿತ್ತು. ಜೆ.ಸಿ. ಬೋಸ್ ಪ್ರಕರಣದಲ್ಲಿ, ಮುಖ್ಯಮಂತ್ರಿ ಭೈರನ್‌ಸಿಂಗ್ ಸೆಖಾವತರು. 'ಭಾರತದ ಯಾವುದೇ ರಾಜ್ಯಗಳಿಗೆ ಹೋಲಿಸಿದರೆ ರಾಜಸ್ಥಾನದಲ್ಲಿ ಮಹಿಳೆಯರ ಹೆಚ್ಚು ಗೌರವಿಸಲ್ಪಡುತ್ತಾರೆ. ಮಹಿಳಾ ಗುಂಪುಗಳು ನಡೆಸುತ್ತಿರುವ ಚಳುವಳಿ ರಾಜಕೀಯ ಪ್ರೇರಿತ; ತನ್ನ ಸರಕಾರ ಬೀಳಿಸಲು ಎಡಪಂಥೀಯರು ನಡೆಸಿದ ಹುನ್ನಾರ' ಎಂದು ಕರೆದರೆ, ದೀಗ್‌ನ ಸ್ವತಂತ್ರ ಪಕ್ಷದ ಶಾಸಕ ಅರುಣ್‌ಸಿಂಗರು, 'ಇದು ರಾಜಾಸ್ಥಾನ ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ಚುನಾವಣೆಯಲ್ಲಿ ಜಾಟರು ಅವಕಾಶ ಪಡೆಯದಂತೆ ಬ್ರಾಹ್ಮಣರು ಮತ್ತು ರಜಪೂತರು ನಡೆಸಿದ ಪಿತೂರಿ' ಎಂದರು.

'ರಾಜಕಾರಣಿಗಳು ಮಹಿಳೆಯರನ್ನು ಗೌರವಿಸುವುದಿಲ್ಲ. ಇವರು ಮಾಡುವ ಮೊದಲ ಕೆಲಸವೆಂದರೆ, ಮಹಿಳೆಯ ನಡತೆಯನ್ನು ಪ್ರಶ್ನಿಸುವುದು. ಅಪರಾಧಿಗಳನ್ನು ರಕ್ಷಿಸುವ ಕೆಲಸದಲ್ಲಿ, ಶಿಕ್ಷೆಯನ್ನು ಕಡಿಮೆಗೊಳಿಸುವ ವಿಷಯದಲ್ಲಿ ಆಳುವ ಪಕ್ಷ ತನ್ನ ಅಸಾಮಾನ್ಯ ಆಸಕ್ತಿಯನ್ನು ತೋರುತ್ತದೆ' ಎನ್ನುತ್ತಾರೆ ಅತ್ಯಾಚಾರಕ್ಕೆ ಬಲಿಯಾದ ಮಗಳ ನೊಂದ ತಂದೆ. ಈಗ ನಡೆದದ್ದೂ ಅದೇ. ಜೆ.ಸಿ. ಬೋಸ್ ಪ್ರಕರಣದ ಬಗ್ಗೆ ಶಾಸಕ ಅರುಣಸಿಂಗರು, 'ಈ ಯುವತಿ ಅವನೊಂದಿಗೆ ಏಳು ವರ್ಷಗಳಿಂದ ಲೈಂಗಿಕ ಸಂಬಂಧವಿಟ್ಟುಕೊಂಡಿದ್ದಾಳೆಂದರೆ ಅವಳ ವೃತ್ತಿಯಾಗಿರಬೇಕು. ಅವಳಿಗೆ 25 ವರ್ಷಗಳಾಗಿವೆ. ಎಫ್‌ಐಆರ್‌ನಲ್ಲಿ ತಾನು ಅವನಿಗಾಗಿ 40 ನಿಮಿಷಗಳವರೆಗೆ ಕಾದಿದ್ದು ಸ್ಕೂಟರ್‌ನಲ್ಲಿ ಅವನೊಡನೆ ಹೋದಳು ಎಂದಿದೆ' ಅನ್ನುತ್ತಾರೆ. ವಿಧಾನಸಭೆಯಲ್ಲಿ ಇನ್ನೊಬ್ಬ ಶಾಸಕರು, ಯಾರಾದರೂ ಹಲವು ವರ್ಷಗಳ ಕಾಲ ಬ್ಲಾಕ್‌ಮೇಲ್ ಗೊಳಗಾಗುತ್ತಾರೆ, ಅತ್ಯಾಚಾರಕ್ಕೊಳಗಾಗುತ್ತಾರೆಂದರೆ ನಂಬಲು ಸಾಧ್ಯ. ಅವಳು ನಿಜವಾಗಿಯೂ ಕಾಲ್‌ಗರ್ಲ್ ಇರಬೇಕು' ಎಂದಿದ್ದಾರೆ. ಸುಮೇರಪುರದ ಶಾಸಕ ಬೀನಾಕಕ್ ಮಾತ್ರ ನೊಂದ ಮಹಿಳೆಯರ ಪರವಾಗಿ ವಾದಿಸಿ ಪಕ್ಷದವರ ಕೋಪಕ್ಕೆ ಗುರಿಯಾಗಿದ್ದಾರೆ. ಗೃಹಮಂತ್ರಿ ಗುಂಪು ಅತ್ಯಾಚಾರ ಪ್ರಕರಣದ ಎಫ್‌ಐಆರ್ ಓದುತ್ತಿದ್ದಾಗ ವಿಧಾನ ಸಭೆಯಲ್ಲಿದ್ದ ಪ್ರತಿಯೊಬ್ಬರೂ ವಿಚಿತ್ರ ಸುಖವನ್ನು ಅನುಭವಿಸುತ್ತಿದ್ದರಂತೆ. ಇಡೀ ವಿಧಾನಮಂಡಲ ಜಾತಿ ಆಧಾರದ ಮೇಲೆ ಗುಂಪುಗಳಾಗಿ ಒಡೆದಿತ್ತಂತೆ. ಜಾಟರೆಲ್ಲಾ ಪಕ್ಷಭೇದ ಮರೆತು ಯುವತಿಯ ನಡತೆಯ ಮೇಲೆ ಪ್ರಹಾರ ಮಾಡಿದರಂತೆ. ಬೀಮಾಲ ಪ್ರಕರಣದಲ್ಲಿ ಕೂಡ ಆ ಮಹಿಳೆಯ ನಡತೆಯನ್ನು ಪ್ರಶ್ನಿಸಲಾಯಿತು. 'ಅವಳು 5 ಲಕ್ಷ ಕೊಡುವಂತೆ ಜೈನ ಮುನಿಯನ್ನು ಕೇಳಿದ್ದಳಂತೆ' ಎಂದು ಚರ್ಚೆಯ ಆರಂಭದಲ್ಲೇ ಒಬ್ಬರು ಹೇಳಿದರೆ, ಶಿಕ್ಷಣ ಮಂತ್ರಿ ಗುಲಾಬ್‌ಚಂದ್ ಕಠಾರಿಯಾ ವಿಧಾನ ಸಭೆಯಲ್ಲೇ ಬಿಕ್ಕಿ ಬಿಕ್ಕಿ ಅತ್ತರು. ಸಾಧುವೊಬ್ಬರ ಮೇಲೆ ಅಂಥ ಆರೋಪ ಹೊರಿಸುವುದು ಸರಿಯಲ್ಲ ಎನ್ನುವುದು ಅವರ ವಾದ. ಶಾಸಕರಾದ ಉಜ್ವಲ ಅರೋರಾ, ಮೀನಾಸಿಂಗ್, ಸೂರಜಕಾಂತ್ ವ್ಯಾಸ್ ಮತ್ತಿತರರು ಇದನ್ನು ಜೈನಧರ್ಮೀಯರ ವಿರುದ್ಧದ ಪಿತೂರಿ ಎಂದು ಕರೆದರು. ಬಿಜೆಪಿ ಶಾಸಕ ಕನ್ಹಯ್ಯಲಾಲ್ ಮೀನಾ ಬನವಾರಿದೇವಿಯ ವಿರುದ್ಧದ ನಾಯಕತ್ವ ವಹಿಸಿ, 'ಬನವಾರಿ ಅತ್ಯಾಚಾರಕ್ಕೊಳಗಾಗಿಲ್ಲ. ಅವಳು ಪ್ರಚಾರ ಮತ್ತು ಪ್ರಶಸ್ತಿಗಾಗಿ ಸುಳ್ಳು ಹೇಳುತ್ತಿದ್ದಾಳೆ' ಎಂದು ಚೀರಾಡುತ್ತಿದ್ದ. ಶಾಲಿನಿಶರ್ಮ ಪ್ರಕರಣದಲ್ಲಿ ಅದರ ಹಿಂದಿರುವ ಪಕ್ಷದ ಇತರ ನಾಯಕರನ್ನು ಬಯಲಿಗೆಳೆಯುವ ಬೆದರಿಕೆಯನ್ನು ಆಪಾದಿತ ಹಾಕಿದ್ದನೆಂಬ ಕಾರಣದಿಂದ ಅವನನ್ನು ರಕ್ಷಿಸಲಾಗಿತ್ತು. ಜೆ.ಸಿ.ಬೋಸ್ ಪ್ರಕರಣದಲ್ಲಿ ಕೃಷಿ ಮಂತ್ರಿ ಗ್ಯಾನ್‌ಸಿಂಗ್ ಚೌಧರಿಯ ಸೋದರಿಯ ಮಗನೂ ಆಪಾದಿತನಾಗಿದ್ದು ಉಳಿದವರೆಲ್ಲಾ ಶ್ರೀಮಂತ ಜಾಟ ಯುವಕರಾಗಿದ್ದಾರೆ. ಇವರನ್ನೆಲ್ಲಾ ರಕ್ಷಿಸುವ ಪ್ರಯತ್ನ ನಡೆದಿದೆ. ಅತ್ಯಾಚಾರಕ್ಕೆ ಬಲಿಯಾದ ಮಹಿಳೆಯ ಹೆಸರನ್ನು ಬಿಟ್ಟುಕೊಡಬಾರದೆಂದು ಸರ್ವೋಚ್ಚ ನ್ಯಾಯಾಲಯದ ಆದೇಶವನ್ನು ಗೃಹಮಂತ್ರಿ ಉಲ್ಲಂಘಿಸಿದ್ದಾರೆ.

ಅತ್ಯಾಚಾರಿಗಳನ್ನು ರಕ್ಷಿಸುವುದರಿಂದ ಮತ್ತಷ್ಟು ಅತ್ಯಾಚಾರಿಗಳು ಹುಟ್ಟಿಕೊಳ್ಳುತ್ತಾರೆ. ಮಹಿಳೆಯರ ವಿರುದ್ಧದ

ಅಪರಾಧಗಳ ಹೆಚ್ಚಳಕ್ಕೆ ರಾಜಕಾರಣಿಗಳೇ ಕಾರಣ ಎನ್ನುತ್ತಾರೆ ಜನವಾದಿ ಮಹಿಳಾ ಸಮಿತಿಯ ಕಾರ್ಯದರ್ಶಿ ಸುಮಿತ್ರಾ ಚೋಪ್ರಾ. 'ಇದಕ್ಕೆ ಕಾರಣ ಅಧಿಕಾರಿಗಳು ಮಾತ್ರವಲ್ಲ; ಠಾಣೆ ಅಥವಾ ಸರಪಂಚರ ಮಟ್ಟದ ಸರಕಾರೀ ಯಂತ್ರವೇ ಅಪರಾಧಿಯ ಪರ ವಹಿಸುತ್ತದೆ' ಎನ್ನುವುದು ಫೋರಂ ಎಗೆನೆಸ್ಟ್ ವಾಯಲೆನ್ಸ್ ಆನ್ ವುಮೆನ್' ವೇದಿಕೆಯ ಕವಿತಾ ಶ್ರೀವಾಸ್ತವ ಅಭಿಪ್ರಾಯ. ಇದಕ್ಕೆ ಅವರು ರಾಜುವಿನ ಉದಾಹರಣೆಯನ್ನೇ ಕೊಡುತ್ತಾರೆ.

ಅಪರಾಧಗಳ ಸಂಖ್ಯೆ ಹೆಚ್ಚುತ್ತಿದೆ ಎನ್ನುವುದಕ್ಕೆ ಈ ಮೂರು ವರ್ಷಗಳ ಸರಕಾರಿ ಅಂಕಿ ಅಂಶಗಳೂ ಸಾಕ್ಷಿಯಾಗಿವೆ. ಅತ್ಯಾಚಾರ ಪ್ರಕರಣಗಳು ಶೇ. 16, ವರದಕ್ಷಿಣೆ ಆತ್ಮಹತ್ಯೆಗಳು ಶೇ. 43, ವರದಕ್ಷಿಣೆ ಕೊಲೆಗಳು ಶೇ. 5, ವರದಕ್ಷಿಣೆ ಹಿಂಸೆ ಶೇ. 50ರಷ್ಟು ಹೆಚ್ಚಿವೆ. 1996ರಲ್ಲಿ ಲೈಂಗಿಕ ಕಿರುಕುಳ ಅಥವಾ ಚುಡಾಯಿಸುವ 2,586 ಪ್ರಕರಣಗಳು ದಾಖಲಾಗಿ ಎಂಥವರನ್ನೂ ದಂಗು ಬಡಿಸುವಂತಿದೆ.

ಮಹಿಳೆಯರ ವಿರುದ್ಧದ ಅಪರಾಧಗಳ ಸಂಖ್ಯೆಯ ಹೆಚ್ಚಳವಿದೆಯೆನ್ನುವುದನ್ನು ಎಲ್ಲರೂ ಒಪ್ಪುತ್ತಾರಾದರೂ, ಇತರ ರಾಜ್ಯಗಳಲ್ಲಿ ಇನ್ನೂ ಹೆಚ್ಚಿದೆ ಎಂದು ಗೃಹಮಂತ್ರಿ ಕೈಲಾಶ್ ಮೇಘವಾಲರು ಹೇಳಿದರೆ, "ಇತರ ರಾಜ್ಯಗಳಿಗಿಂತ ಮಹಿಳೆಯರು ಇಲ್ಲಿ ಹೆಚ್ಚು ಸುರಕ್ಷಿತರಾಗಿದ್ದಾರೆ. ರಾಜಕೀಯ, ಉದ್ಯೋಗ ಮುಂತಾದ ಕ್ಷೇತ್ರಗಳಲ್ಲಿ ಮುಂದುವರೆಯುತ್ತಿದ್ದಾರೆ. ಅಪರಾಧಗಳು ಹೆಚ್ಚಾಗುತ್ತಿಲ್ಲ; ಮಾಧ್ಯಮಗಳ ಗಮನ ಸೆಳೆಯುತ್ತಿವೆ ಅಷ್ಟೆ. ಆದರೆ ಜಾತಿ ಆಧಾರಿತ ವಸತಿ ನಿಲಯಗಳಲ್ಲಿರುವವರು ವಿದ್ಯಾರ್ಥಿಗಳಲ್ಲ, 'ಅಡ್ಡಾ'ಗಳು ಎನ್ನುತ್ತಾರೆ ಬಿಜೆಪಿ ರಾಜ್ಯ ಘಟಕದ ಉಪಾಧ್ಯಕ್ಷ ಘನಶ್ಯಾಮ ತಿವಾರಿ. ಡಿಜಿಪಿ ಅಮಿತಾಬ್ ಗುಪ್ತಾ ಹಾಗೂ ಸ್ಟೇಟ್ ಹೋಂ ಕಮಿಷನರ್ ಅರುಣ ಕುಮಾರರ ಪ್ರಕಾರ, ಇತರ ರಾಜ್ಯಗಳಿಗಿಂತ ಇಲ್ಲಿ ಪ್ರಕರಣಗಳನ್ನು ದಾಖಲಿಸುವುದು ಸುಲಭ; ಅಲ್ಲದೆ ಇದು ಮಹಿಳೆಯರಲ್ಲಿ ಹೆಚ್ಚುತ್ತಿರುವ ಜಾಗೃತಿಯ ದ್ಯೋತಕ.

ಸ್ವತಂತ್ರ ಪಕ್ಷದ ಶಾಸಕ ಅರುಣಸಿಂಗರು ಜೆ.ಸಿ. ಬೋಸ್ ಪ್ರಕರಣದಲ್ಲಿ ಜಾಟರನ್ನು ರಕ್ಷಿಸುವ ಪ್ರಯತ್ನ ಮಾಡಿದರೂ ಮಹಿಳೆಯರ ವಿರುದ್ಧದ ಅಪರಾಧಗಳನ್ನು ಸಮರ್ಥಿಸುತ್ತಾರೆನ್ನಲಾಗುವುದಿಲ್ಲ. ಇವರೇ ಹೇಳುವಂತೆ, "ಪ್ರತಿ ದಿನ ನನ್ನ ಬಳಿ ಬಂದು ಒಂದು ಅತ್ಯಾಚಾರ ಪ್ರಕರಣ ತರುತ್ತಾರೆ. ನಾನು ಮಧ್ಯೆ ಪ್ರವೇಶಿಸಿ ಎರಡೂ ಕಡೆಯವರ ನಡುವೆ ರಾಜಿ ಒಪ್ಪಂದ ಮಾಡಿಸುತ್ತೇನೆ. ಕಾರಣ, ಇವರಿಬ್ಬರೂ ನನ್ನ ಮತದಾರರು. ಒಂದು ವೇಳೆ ಒಪ್ಪಂದವೇರ್ಪಡದಿದ್ದಲ್ಲಿ ಹುಡುಗಿಯ ಭವಿಷ್ಯ ಕತ್ತಲಾಗುತ್ತದೆ' ಎಂದು ಈಗಿರುವ ಭಯಾನಕ ವ್ಯವಸ್ಥೆಯ ಬಗ್ಗೆ ಮಾತಾಡುತ್ತಾರೆ.

ಮಹಿಳಾ ಗುಂಪುಗಳ ಒತ್ತಡದ ಪರಿಣಾಮವಾಗಿಯೋ ಎಂಬಂತೆ ಸರಕಾರ ಜಿಲ್ಲಾ ಮಟ್ಟದ ಸಮಿತಿಗಳನ್ನು ರಚಿಸಲು ಯೋಚಿಸುತ್ತಿದೆ. ಜಿಲ್ಲಾಧಿಕಾರಿಯ ಅಧ್ಯಕ್ಷತೆಯಿರುವ ಸಮಿತಿಯಲ್ಲಿ ಪೋಲೀಸು ಇಲಾಖೆ, ಸಮಾಜ ಕಲ್ಯಾಣ ಹಾಗೂ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗಳು, ಸರಕಾರೇತರ ಸಂಘ ಸಂಸ್ಥೆಗಳ ಪ್ರತಿನಿಧಿಗಳು ಇರುತ್ತಾರೆ. ಈ ಸಮಿತಿಗೆ ಮಹಿಳೆಯರ ಮೇಲಿನ ಅಪರಾಧಗಳ ತನಿಖೆ ಮಾಡುವ ಹಾಗೂ ನೊಂದ ಮಹಿಳೆಯರಿಗೆ ತಾತ್ಕಾಲಿಕ ಪರಿಹಾರ ನೀಡುವ ಅಧಿಕಾರವಿರುತ್ತದೆ. ಪೋಲೀಸು ಇಲಾಖೆಯ ವಿವಿಧ ಮಟ್ಟದ ಹುದ್ದೆಗಳಲ್ಲಿ ಶೇ. 10ರಷ್ಟನ್ನು ಮಹಿಳೆಯರಿಗೆ ಮೀಸಲಿಡುವ ಬಗ್ಗೆ ಕೂಡ ಚಿಂತಿಸಲಾಗುತ್ತಿದೆ. ಈಗ ಇಲಾಖೆಯಲ್ಲಿ ಶೇ. 1ರಷ್ಟು ಮಾತ್ರ ಮಹಿಳೆಯರಿದ್ದಾರೆ.

ಯಾವುದೇ ಮಹಿಳೆ ತಾನು ಅತ್ಯಾಚಾರಕ್ಕೊಳಗಾಗಿದ್ದೇನೆಂದು ತಿಳಿಸಿದ ಕೂಡಲೇ ಎಫ್‌ಐಆರ್ ದಾಖಲಾಗಬೇಕು ಹಾಗೂ ಅವಳನ್ನು ವೈದ್ಯಕೀಯ ಪರೀಕ್ಷೆಗೊಳಪಡಿಸಬೇಕು. ಪ್ರಕರಣವನ್ನು ದಂಡಸಂಹಿತೆಯ 164ನೇ ಕಾಲಂನಲ್ಲಿ ದಾಖಲಿಸಬೇಕು ಹಾಗೂ ನ್ಯಾಯಾಲಯಕ್ಕೆ ಹಾಜರುಪಡಿಸಬೇಕು ಎಂದು ಪೋಲೀಸು ಠಾಣೆಗಳಿಗೆ ಸರಕಾರ ಆದೇಶ ನೀಡಿತ್ತು. ಇದು ಮಹಿಳಾ ಸಂಘಗಳು ಗೃಹ ಅಧೀಕ್ಷಕರೊಡನೆ ಹಲವು ಬಾರಿ ನಡೆಸಿದ ಸಭೆಗಳ ಪರಿಣಾಮವಾಗಿತ್ತು. ಈಗಲೂ ಮಹಿಳಾ ಗುಂಪುಗಳೊಂದಿಗೆ ಮಾಸಿಕ ಸಭೆಗಳು ನಡೆಯುತ್ತವೆ. ವರದಿಯಾಗದ, ತನಿಖೆಯಾಗದೆ ಉಳಿದುಬಿಡುವ ಪ್ರಕರಣಗಳ ಬಗ್ಗೆ ಇಲಾಖೆಯ ಗಮನ ಸೆಳೆಯಬಹುದಾಗಿದೆ.

ಒಂದು ಕಡೆ ಸರಕಾರ ಇಷ್ಟೆಲ್ಲಾ ಪ್ರತಿಕ್ರಿಯಿಸುತ್ತಿದೆಯಾದರೂ ಮಹಿಳಾ ಗುಂಪುಗಳು ಒತ್ತಡ ತರದ ಹೊರತು ಯಾವುದೇ ಕ್ರಮ ತೆಗೆದುಕೊಳ್ಳಲು ಅದು ಮುಂದಾಗುವುದಿಲ್ಲ ಎನ್ನುತ್ತಾರೆ ಶ್ರೀವಾಸ್ತವ. ಮಹಿಳಾ ಗುಂಪುಗಳು, ಮತ್ತಿತರ ಗುಂಪುಗಳು ರಾಜಾಸ್ಥಾನದಲ್ಲಿ ಇತರ ರಾಜ್ಯಗಳಿಗಿಂತ ಪರಿಸ್ಥಿತಿ ಉತ್ತಮವಾಗಿದೆಯೇ ಇಲ್ಲವೇ ಎಂದು ಯೋಚಿಸುವುದಕ್ಕಿಂತ ಮಹಿಳೆಯರ ವಿರುದ್ಧದ ಒಂದೇ ಒಂದು ಅಪರಾಧವನ್ನೂ ಸಹಿಸದಿರುವ ಮಟ್ಟ ತಲುಪಿದೆ. "ಮಹಿಳೆಯರಿಗೆ ವಿಶ್ವವಿದ್ಯಾನಿಲಯದ ಆವರಣದಲ್ಲಿ, ದುಡಿಯುವ ಸ್ಥಳಗಳಲ್ಲಿ, ಬೀದಿಗಳಲ್ಲಿ, ಮನೆಗಳಲ್ಲಿ ಸುರಕ್ಷಿತ ವಾತಾವರಣದ ಅಗತ್ಯವಿದೆ' ಎಂದು ಕವಿತಾ ಶ್ರೀವಾಸ್ತವ ಹೇಳುತ್ತಾರೆ.

'ಎಫ್‌ಐಆರ್ ಕೂಡಲೆ ಸಿದ್ಧವಾಗುತ್ತದೆ; ಹಿಂಸೆಗೆ ಬಲಿಯಾದವರು ಪೋಲೀಸರ ಕಿರುಕುಳಕ್ಕೊಳಗಾಗುವುದಿಲ್ಲ; ವೈದ್ಯಕೀಯ ಪರೀಕ್ಷೆಗಳು ಕೂಡಲೆ ನಡೆಯುತ್ತವೆ; ಚಲನಗಳು ಕೂಡಲೆ ದೊರೆಯುತ್ತವೆ ಎನ್ನುವ ಭರವಸೆ ದೊರೆಯುವವರೆಗೆ ಈಗಿನ ಹೋರಾಟ ಮುಂದುವರೆಯುತ್ತವೆ' ಎಂದು ಕವಿತಾ ಹೇಳುತ್ತಾರೆ. ಅವರ ಪ್ರಕಾರ, ಈಗ ಎಲ್ಲವೂ ತಡವಾಗುತ್ತಿವೆ. ಪೋಲೀಸರು, ವೈದ್ಯರು ಹಾಗೂ ವಕೀಲರು ಮಹಿಳೆಯ ತನ್ನಿಚ್ಛೆಯಿಂದಲೇ ಲೈಂಗಿಕ ಚಟುವಟಿಕೆಯಲ್ಲಿ ತೊಡಗಿ ಸಿಕ್ಕಿಬಿದ್ದಾಗ ಮಾತ್ರ 'ಅತ್ಯಾಚಾರ' ಎಂದು ಅಳುತ್ತಾಳೆ ಎಂಬ ನಂಬಿಕೆಯಿಂದಲೇ ಆರಂಭಿಸುತ್ತಾರೆ.

ಈ ಹೋರಾಟದ ಇನ್ನೊಂದು ಬೇಡಿಕೆಯೆಂದರೆ, ಹಿಂಸೆಗೆ ಬಲಿಯಾದವರಿಗೆ ಕಾನೂನಿನ ದೀರ್ಘಕಾಲಿಕ ಹೋರಾಟದ ಅವಧಿಯಲ್ಲಿ ಪುನರ್ವಸತೀಕರಣ. ರಾಜಾಸ್ಥಾನ ಸರಕಾರ ಈಗ 10,000 ರೂ. ಮೊತ್ತದ ಪರಿಹಾರ ನೀಡುತ್ತಿದೆಯಾದರೂ ಇನ್ನೂ ಹೆಚ್ಚಿನ ಮೊತ್ತದ ಪರಿಹಾರ ನೀಡಬೇಕೆನ್ನುವುದು. "ಎಲ್ಲಾ ತಂದೆಯರೂ, ಗಂಡಂದಿರೂ ತಮ್ಮ ಮಹಿಳೆಯರನ್ನು ಕರೆತಂದು ಸುಳ್ಳು ಪ್ರಕರಣಗಳನ್ನು ದಾಖಲಿಸಲು ಠಾಣೆಯ ಮುಂದೆ 'ಕ್ಯೂ' ನಿಲ್ಲುತ್ತಾರೆ. ಎಂಬ ಹೇಳಿಕೆ ನೀಡಿ ಈ ಬೇಡಿಕೆಯನ್ನು ಶೆಖಾವತ್ ತಳ್ಳಿಹಾಕಿದ್ದರು! ಗೃಹಮಂತ್ರಿ ಅಮಾನತ್ತುಗೊಳ್ಳುವುದು ಹಾಗೂ ಜೆ.ಸಿ. ಬೋಸ್ ಹಾಗೂ ಬೀನ್‌ಮಾಲ್ ಪ್ರಕರಣಗಳೆರಡರಲ್ಲೂ ಆಪಾದಿತರಾದವರೆಲ್ಲರೂ ದಸ್ತಗಿರಿಯಾಗಬೇಕೆಂಬುದೇ ಹೋರಾಟದ ಮತ್ತೊಂದು ಬೇಡಿಕೆ.

ರಾಜಾಸ್ಥಾನದಲ್ಲಿ ಮಹಿಳೆಯರ ಸಮಸ್ಯೆಗಳು ಬೆಟ್ಟದಷ್ಟು. ಇಂದಿಗೂ ಹೆಣ್ಣುಮಕ್ಕಳು ಸತಿ ಹೋಗುತ್ತಾರೆ, ವರದಕ್ಷಿಣೆಗಾಗಿ ಕೊಲೆಯಾಗುತ್ತಾರೆ. ಭ್ರೂಣದ ವ್ಯವಸ್ಥೆಯಲ್ಲಿಯೇ ಲಿಂಗಪತ್ತೆ ಹಚ್ಚುವ ಕಾರ್ಯ ನಡೆಯುತ್ತವೆ, ಆ ಅವಸ್ಥೆಯಲ್ಲಿ ಬದುಕುಳಿದರೆ ಹುಟ್ಟಿದ ಕೂಡಲೆ ಸಾವು ಸನಿಹವಾಗುತ್ತದೆ. ಶಾಸಕನೊಬ್ಬ ತನ್ನ ಆಗ ತಾನೇ ಹುಟ್ಟಿದ ಮೂರು ಹೆಣ್ಣು ಮಕ್ಕಳನ್ನೂ ಕೊಂದಿದ್ದ ಅಥವಾ ಕೊಲ್ಲಿಸಿದ್ದನೆನ್ನುವುದು ಎಲ್ಲರಿಗೂ ತಿಳಿದ ವಿಷಯ. ಹಾಡುಹಗಲಲ್ಲೇ ಹೆಣ್ಣು ಮಕ್ಕಳು ಅತ್ಯಾಚಾರದಂಥ ಲೈಂಗಿಕ ಶೋಷಣೆಗೊಳಗಾಗುತ್ತಿದ್ದಾರೆ. ತನ್ನ ತಾಯಿಯ ಗರ್ಭದಲ್ಲೇ ಸುರಕ್ಷಿತವಾಗಿಲ್ಲದ ಹೆಣ್ಣು ಮಗು ಜನನದ ನಂತರ ಸುರಕ್ಷಿತವಾಗಿರಲು ಹೇಗೆ ಸಾಧ್ಯ' ಎನ್ನುವ ವಕೀಲರೊಬ್ಬರ ಪ್ರಶ್ನೆ ಹಲವರ ಪ್ರಶ್ನೆಯೂ ಹೌದು. ಧರ್ಮ, ಜಾತಿ, ಶ್ರೀಮಂತಿಕೆ, ರಾಜಕೀಯದಂಥ ಹಲವು ಪ್ರಬಲ ಶಕ್ತಿಗಳಿಗೆದುರಾಗಿ ಈಸಿ ಹೆಣ್ಣು ನ್ಯಾಯ ಪಡೆಯಬಲ್ಲಳೆ? ಸಮಾಜ ಕಾರ್ಯಕರ್ತೆ ಆಲೀಸ್‌ಗಾರ್ಗ್ ಮಾತ್ರ ಪರಿಸ್ಥಿತಿ ಬದಲಾಗುವ ಆಶಾಭಾವನೆ ಹೊಂದಿದ್ದಾರೆ. ರಾಜಾಸ್ಥಾನದಲ್ಲಿ ಹುಟ್ಟಿರುವೆಂಬ ಕಾರಣಕ್ಕಾಗಿಯೇ ಕೆಲವನ್ನು ಸಹಿಸುವುದು ಅನಿವಾರ್ಯವೆಂದು ಭಾವಿಸುವ ಸಂಘಟನೆಗಳು ಬೆಚ್ಚದೆ ಬೆದರದೆ ತಮ್ಮ ಮುಖ್ಯ ಬೇಡಿಕೆಗಳ ಈಡೇರಿಕೆಗಾಗಿ ಸತತ ಹೋರಾಟವನ್ನು ನಡೆಸಿವೆ; ಎಂದಾದರೊಂದು ದಿನ ಸಿಗಬಹುದಾದ ನ್ಯಾಯದ ನಿರೀಕ್ಷೆಯಲ್ಲಿವೆ.

## ಮಹಿಳೆಯರ ವಿರುದ್ಧದ ಅಪರಾಧಗಳು

| ಅಪರಾಧ | 1994 | 1995 | 1996 |
|---|---|---|---|
| ಅತ್ಯಾಚಾರ | 1002 | 1036 | 1162 |
| ವರದಕ್ಷಿಣೆ ಕೊಲೆ | 330 | 369 | 349 |
| ವರದಕ್ಷಿಣೆ ಆತ್ಮಹತ್ಯೆ | 69 | 91 | 99 |
| ವರದಕ್ಷಿಣೆ ಹಿಂಸೆ | 2608 | 3203 | 3920 |

ಮೂಲ : *ರಾಜಾಸ್ಥಾನದ ಪೋಲೀಸು ಇಲಾಖೆಯ ವಾರ್ಷಿಕ ವರದಿ; ಈ ವರ್ಷ ವಿಧಾನಸಭೆಯಲ್ಲಿ ಮಂಡಿಸಲಾಯಿತು.*

❋ ❋ ❋ ❋ ❋ ❋

ನಿಶಾ (ಹೆಸರು ಬದಲಿಸಿದೆ) ಮೂವತ್ತೇಳು ವರ್ಷ ವಯಸ್ಸಿನ ಸಂಪ್ರದಾಯಪರ ಗುಜರಾತೀ ಮಹಿಳೆ. ಇವಳ ಪತಿ ಮೆಹತಾ ಒಬ್ಬ ಸಣ್ಣ ವ್ಯಾಪಾರಿ. ಕಲಕತ್ತೆಯಿಂದ ಮುಂಬೈಗೆ ಬಂದು ಎರಡು ವರ್ಷಗಳಾಗಿತ್ತು.

ಇಬ್ಬರು ಗಂಡು ಮಕ್ಕಳಲ್ಲಿ 17 ವರ್ಷಗಳ ಕಿರಿಯ ಮಗ ಲೋಕೇಶ ವಿಜಯನ ಇಚ್ಛೆಯಂತೆ 35 ವರ್ಷ ವಯಸ್ಸಿನ ಜೈನಮುನಿಯನ್ನು ಈ ಕುಟುಂಬ ಭೇಟಿ ಮಾಡಿತು. ಜೈನಮುನಿ ಲೋಚೇಂದ್ರ ವಿಜಯ ಜೈನ ಮುನಿಗಳ ತಂಡದ

ಮುಖಂಡನಾಗಿದ್ದ. ಇವನನ್ನು ಹೋದ ವರ್ಷದ ಫೆಬ್ರುವರಿಯಲ್ಲಿ ಭೇಟಿ ಮಾಡಿದ ಕುಟುಂಬ ಮಗನನ್ನು ಜೈನಮುನಿಯಾಗಲು ಅಗತ್ಯವಾದ ಅಧ್ಯಯನಕ್ಕಾಗಿ ಆಶ್ರಮಯದಲ್ಲೇ ಬಿಟ್ಟು ಹೊರಟಿತು.

ಕೆಲವು ಸಮಯದ ನಂತರ ಮಗ ಲೋಕೇಶನಿಗೆ ಜೈನಮುನಿಗಳ ಬಗೆಗೆ ಭ್ರಮನಿರಸನವಾದುದು ತಿಳಿಯಿತು. ಅವರು ಮುನಿಗಳಿಗೆ ನಿಷೇಧಿತವಾದ ಎಲ್ಲವನ್ನೂ ಮಾಡುತ್ತಿದ್ದರೆಂದು ತಿಳಿಯಿತು. ಉದಾಹರಣೆಗೆ, ತಂಪುಪಾನೀಯ, ಪಾವ್‌ಬಾಜಿ, ಈರುಳ್ಳಿ, ಬೆಳ್ಳುಳ್ಳಿ ಮುಂತಾದವನ್ನು ಸೇವಿಸುತ್ತಿದ್ದರು. ಚಲನಚಿತ್ರಗಳನ್ನು, ಅಶ್ಲೀಲ ಚಿತ್ರಗಳನ್ನೂ ನೋಡುತ್ತಿದ್ದರು. ಮಹಿಳೆಯರ ಪಕ್ಕದಲ್ಲಿ ಕುಳಿತುಕೊಳ್ಳುತ್ತಿದ್ದರು.

ನಿಶಾ ಕುಟುಂಬ ಜೈನಮುನಿಗಳು ನಗರದಿಂದ ಹೊರಗೆ ಕೆಲವು ದಿನಗಳ ಶಿಬಿರಗಳಲ್ಲಿದ್ದಾಗ ಮಗನನ್ನು ಭೇಟಿ ಮಾಡುತ್ತಿದ್ದರು. ಲೋಕೇಶನನ್ನು ಇವರ ಬಳಿ ಅವನ ಗುರು ಹೊಗಳುತ್ತಿದ್ದರು.

ಈ ಬಾರಿ ರಾಜಾಸ್ಥಾನದ ಜಾಲೋರ್ ಜಿಲ್ಲೆಯ ಬೀನ್‌ಮಾಲ್ ಎಂಬ ಹಳ್ಳಿಯಲ್ಲಿ ಜೈನಮುನಿಗಳ ನಾಲ್ಕು ತಿಂಗಳ ಶಿಬಿರವಿತ್ತು. ಮಗನನ್ನು ನೋಡುವುದರೊಂದಿಗೆ ತಂದೆ ತಾಯಿಗಳನ್ನೂ ನೋಡುವ ಬಯಕೆ ನಿಶಾಗೆ. ಬೀನ್‌ಮಾಲ್‌ಗೆ ಬಂದವಳೇ ಅಲ್ಲಿಗೆ ಬಂದಿದ್ದ ತನ್ನ ತಾಯಿಯೂ ಮೊಮ್ಮಗನನ್ನು ನೋಡಬಯಸಿದಾಗ ನಿಶಾ ಗುರುವಿನ ಅನುಮತಿ ಪಡೆದು ಮಗನನ್ನು ಕರೆತರುವ ಆತುರದಿಂದ ಆಶ್ರಮಕ್ಕೆ ಧಾವಿಸಿದಳು.

ಆಶ್ರಮವನ್ನು ತಲುಪುತ್ತಿದ್ದಂತೆ ಗುರು ಲೋಖೇಂದ್ರನ ಅನುಮತಿ ಪಡೆದು 'ಮಗ ಎಲ್ಲಿದ್ದಾನೆ' ಎಂದು ನೋಡಲು ಕಾತರಿಸಿದ ತಾಯಿಗೆ 'ಮಹಡಿಯ ಮೇಲಿದ್ದಾನೆಂಬ' ಉತ್ತರ ಗುರುವಿನಿಂದ ಸಿಕ್ಕಿತು. ಅವಳು ಮೇಲೇರುತ್ತಿದ್ದಂತೆ ಹಿಂದಿನಿಂದಲೇ ಬಂದ ಗುರುಲೋಖೇಂದ್ರ ಮೆಟ್ಟಿಲ ಮೇಲಿನ ಬಾಗಿಲನ್ನ ಭದ್ರಪಡಿಸಿದ.

"ಆಗ ನನ್ನ ತೋಳುಗಳನ್ನು ಹಿಡಿದು ತನ್ನೆಡೆಗೆ ಎಳೆದುಕೊಂಡ. ನಾನು ಕೂಗಿಕೊಂಡು ಅವನ ಕೆನ್ನೆಗೆ ಬಾರಿಸಿದೆ. ಅವನು ನನ್ನ ಕೈಯನ್ನು ಹಿಡಿದು ಅದನ್ನು ನನ್ನ ಬಾಯಿಗೆ ಒತ್ತಿದ. ಇನ್ನೊಂದು ಕೈಯಲ್ಲಿ ನನ್ನ ಕೂದಲು ಹಿಡಿದು ನೆಲಕ್ಕೆ ಕೆಡವಿದ. ನಾನು ಏನೂ ಮಾಡಲಾರದಾದೆ. ಅವನು ನನ್ನ ಮೇಲೆ ಅತ್ಯಾಚಾರ ನಡೆಸಿದ.

"ಜೈನ ಮಹಿಳೆಯರು ದೇವಸ್ಥಾನಗಳಿಗೆ ಹೋಗುವಾಗ ಒಳ ಉಡುಪುಗಳನ್ನು ಧರಿಸುವಂತಿಲ್ಲ. ಅವನು ಬಹಳ ಬಲಶಾಲಿ, ಕ್ರೂರ ರಾಕ್ಷಸನಂತಿದ್ದ. ನನ್ನ ದೇಹ ಈಗಲೂ ತತ್ತರಿಸುತ್ತಿದೆ. ನನ್ನ ಕೈ-ಕಾಲುಗಳ ಮೇಲೆ ಗೀಚಿದ ಗುರುತುಗಳನ್ನು ನೋಡಿ.

"ನಾನು ಅಳುತ್ತಿದ್ದೆ, ಚೀರಾಡುತ್ತಿದ್ದೆ. ಆದರವನು ಕೆಳಗಿನ ಬಾಗಿಲನ್ನೂ ಹಾಕಿಬಿಟ್ಟಿದ್ದ. 'ನನ್ನನ್ನು ಕೆಡಿಸಿಬಿಟ್ಟೆ' ಎಂದು ಅತ್ತೆ. ಅದಕ್ಕವನು ತನ್ನ ದೇಹದ ಮೇಲಿನ ಮಚ್ಚೆಯೊಂದನ್ನು ತೋರಿಸಿ, 'ಇದರರ್ಥ ನಿನಗೆ ಗೊತ್ತೆ? ನಾನು ಬೇಕಾದಾಗಲೆಲ್ಲಾ ಸಂಭೋಗಿಸಬಹುದು' ಎಂದ. ನಾನು 'ನನ್ನ ತಂದೆತಾಯಿಗಳಿಗೆ ತಿಳಿಸುತ್ತೇನೆ' ಎಂದುದಕ್ಕೆ ನನ್ನ ಮಗ ಅವನ ಬಳಿ ಇರುವುದನ್ನು ನೆನಪಿಸಿ ಯಾರೊಂದಿಗೂ ಬಾಯಿ ಬಿಡಬಾರದೆಂದು ಎಚ್ಚರಿಸಿ ನಕ್ಕು ಹೊರಟುಹೋದ" ಎಂದು ಅವಳು ನೆನಪಿಸಿಕೊಳ್ಳುತ್ತಾಳೆ.

ತನ್ನ ಬಟ್ಟೆ ಸರಿಪಡಿಸಿಕೊಳ್ಳುತ್ತಾ ಹೊರಬಂದ ಅವಳನ್ನು ಮೊದಲಿಗೆ ಕಂಡವನು ಲವೇಶ್ ವಿಜಯಜೀ. ಇವನು ಲೋಖೇಂದ್ರನ ಸೋದರಿಯ ಮಗ. ಇವನೂ ಮುನಿ. ನಡೆಯಲಾಗದೆ ನಡುಗುತ್ತ ಕಷ್ಟಪಡುತ್ತಿದ್ದ ಇವಳ ಕಡೆ ಒಂದು ನೋಟ ಹರಿಸಿ 'ನಿಮ್ಮನ್ನೂ ಅವರು ಕೆಡಿಸಿಬಿಟ್ಟರೆ?' ಎಂದು ಕೇಳಿದ. ದಾರಿಯಲ್ಲಿ ಸಿಕ್ಕ ಬೀನ್‌ಮಾಲಿನ ಒಬ್ಬ ದೊಡ್ಡ ವ್ಯಾಪಾರಿ. ಫೇಮರಚಂದಜೀ ಸೇಠರು ಇವಳನ್ನು ಕಂಡು ಆಸ್ಪತ್ರೆಗೆ ಹಾಗೂ ಪೋಲೀಸು ಠಾಣೆಗೆ ಹೋಗಿ ದೂರು ಕೊಡುವಂತೆ ಹೇಳಿದರು. ನಿಶಾ ಮೊದಲು ಸಿಕ್ಕ ಮನೆ 'ಪಾರ್ವತಿವಿಲ್ಲಾ'ಗೆ ಹೋದಳು. ಆ ಮನೆಯವರು ಯಾವ ರೀತಿಯ ನೆರವು ನೀಡಲು ಮುಂದಾಗದಿದ್ದಾಗ ಅಲ್ಲಿಂದ ಪರಿಚಿತರೊಬ್ಬರ ಮನೆಗೆ ಹೋದಳು. ಅವರು ಅವಳನ್ನು ಆಸ್ಪತ್ರೆಗೆ ಕರೆದೊಯ್ದರು. ಆದರೆ ಅವಳೊಂದಿಗೆ ಒಳಹೋಗಲು ಯಾರೂ ಸಿದ್ಧರಿರಲಿಲ್ಲ. ವೈದ್ಯರು ಪರೀಕ್ಷಿಸಲು ನಿರಾಕರಿಸಿದರು. ಅವರು "ಅತ್ಯಾಚಾರದ ಕುರುಹುಗಳು 40 ನಿಮಿಷಗಳವರೆಗೆ ಮಾತ್ರ ಇರುತ್ತವೆ"ಎಂದರು. ಅವಳಿಗೆ ಏನೂ ಮಾಡಲು ತೋಚಲಿಲ್ಲ. ಆಗಲೇ ಒಂದು ಗಂಟೆ ಸಮಯ ಸರಿದಿತ್ತು.

ನಿಶಾ ತನ್ನ ತಂದೆಗೆ ತಿಳಿಸಲು ಸಭಾಂಗಣಕ್ಕೆ ಹೋದರೆ ಅಲ್ಲಿ ಅವರಿರಲಿಲ್ಲ. ಆದರೆ ಲೋಖೇಂದ್ರ ವಿಜಯ್ ದೊಡ್ಡ ಸಭೆಗೆ ಪ್ರವಚನ ಮುಂದುವರೆಸಿದ್ದ. ನಗರದ ದೊಡ್ಡ ಬಿಲ್ಡರ್ ಸುಮರ್ ಮಲ್ಜಿ ಲುಕ್ಕಡರ ಪತ್ನಿ ಸುವಾಬಾಯಿ ಅಲ್ಲೇ ಇದ್ದಳು. ಅವಳನ್ನು ಕಂಡ ನಿಶಾ ಎಲ್ಲವನ್ನು ಹೇಳಿದಳು. ಸುವಾಬಾಯಿ ಮಾತ್ರ ಇದನ್ನು ಯಾರಿಗೂ ತಿಳಿಸಬಾರದೆಂದೂ, ಅದು ಮಗ ಲೋಕೇಶನಿಗೆ ಕಳಂಕ ತರುವುದೆಂದೂ, ತಾನು ಲೋಖೇಂದ್ರನಿಗೆ ಇಂಥ ಕೆಲಸ ಮಾಡಿದ್ದಕ್ಕಾಗಿ ಛೀಮಾರಿ ಹಾಕುವುದಾಗಿಯೂ ತಿಳಿಸಿದಳು.

ಅಲ್ಲಿಂದ ತನ್ನ ತಂದೆತಾಯಿಯುರುವ ಮನೆಗೆ ನಿಶಾ ಬಂದಳು. ಅಷ್ಟರಲ್ಲಿ ಲೋಖೇಂದ್ರನ ಸಹಾಯಕ ಪ್ರೇಮ್‌ಜೀ ಅಲ್ಲಿಗೆ ಬಂದ. ನಿಶಾಗೆ ಏನನ್ನೂ ಮಾತಾಡದಿರುವಂತೆ

ಸಾಂಕೇತಿಕವಾಗಿ ಬೆದರಿಕೆ ಹಾಕಿದ ನಂತರ ಅವಳ ತಂದೆಗೆ ಲೋಖೇಂದ್ರನನ್ನು ಭೇಟಿ ಮಾಡಲು ತಿಳಿಸಿದ.

ಅವಳು ತನ್ನ ಕುಟುಂಬದ ಸ್ನೇಹಿತ ಉಖ್‌ಚಂದ್ ಚೌಧರಿ ಮನೆಗೆ ಬಂದು ಮುಂದೇನು ಎಂದು ಸಮಾಲೋಚಿಸುತ್ತಿರುವಾಗಲೇ ಅಲ್ಲಿಗೆ ಬಂದ ಪ್ರೇಮ್‌ಜೀ ಲೋಖೇಂದ್ರನನ್ನು ಕಾಣಬೇಕೆಂದು ಹೇಳಿದ. ನಿಶಾ ಅದರಂತೆ ಅಲ್ಲಿಗೆ ಹೋದಾಗ ತನ್ನ ತಂದೆ, ಮಗ ಲೋಕೇಶ, ಅತ್ಯಾಚಾರಿ ಲೋಖೇಂದ್ರ, ಅವನ ಸೋದರ ಲೇಖೇಂದ್ರ ವಿಜಯ್, ಸೋದರಿ ಅನಂತಗುಣ ಹಾಗೂ ಹಿರಿಯ ಮುನಿಗಳಾದ ಹೇಮೇಂದ್ರ ಇದ್ದರು.

"ಹೇಮೇಂದ್ರರು ಕೈಜೋಡಿಸಿ ನನ್ನ ಕಾಲು ಮುಟ್ಟಿದರು; ದಯವಿಟ್ಟು ಲೋಕೇಂದ್ರನನ್ನು ಕ್ಷಮಿಸಿಬಿಡು" ಎಂದರು. ಲೋಖೇಂದ್ರನೂ ನನ್ನ ಕ್ಷಮೆ ಕೋರಿದ. ಆದರೆ ಕ್ಷಮಿಸಲು ನಾನು ಸಿದ್ಧಳಿರಲಿಲ್ಲ. ಆಚಾರ್ಯರು ಚತುರ್ಮಾಸ ಕಳೆದು ಎಲ್ಲರೂ ಅಲ್ಲಿಂದ ಹೊರಡುವವರೆಗೆ ಮಾತಾಡದಿರುವಂತೆ ಬೇಡಿಕೊಂಡರು. ಹಾಗೆಂದು ವಚನ ಕೊಡುವಂತೆ ಕೇಳಿಕೊಂಡರು. ನಾನು ಮಾತ್ರ ಇಲ್ಲಾ ಅನ್ನುತ್ತಲೇ ಇದ್ದೆ" ಎಂದು ಅವಳಿಗೆ ಅವರನ್ನೆಲ್ಲಾ ಎದುರಿಸುವ ಶಕ್ತಿ ಅದೆಲ್ಲಿಂದಲೋ ಬಂದಿತ್ತು.

ನನ್ನ ತಂದೆಯೂ ಸುಮ್ಮನಾಗಲು ಒತ್ತಾಯಿಸುತ್ತಿದ್ದರು. ಇಲ್ಲದಿದ್ದರೆ ತಮ್ಮ ಹೆಸರು, ತಮ್ಮ ವ್ಯಾಪಾರ ಕೆಡುತ್ತದೆಂದು ಭಾವಿಸಿದ್ದರು.

ನಿಶಾ ಮುಂಬೈಗೆ ತನ್ನ ಮನೆಗೆ ಫೋನ್ ಮಾಡಿ ಆ ಕೂಡಲೆ ಬೀನ್‌ಮಾಲ್‌ಗೆ ಬರುವಂತೆ ಗಂಡನಿಗೆ ಸಂದೇಶ ನೀಡಿದಳು. "ಇದನ್ನು ತಿಳಿದ ನನ್ನ ತಂದೆ ಮತ್ತಿತರ ಮುನಿಗಳು, ನನ್ನ ಗಂಡನಿಗೆ ವಿಷಯ ತಿಳಿದರೆ ನನ್ನನ್ನು ಬಿಟ್ಟುಬಿಡುತ್ತಾರೆಂದು ಬೆದರಿಸಿದರು. ಆದರೆ ನಾನು ಎಲ್ಲದಕ್ಕೂ ಸಿದ್ಧಳಾಗಿದ್ದೆ.

"ನಾನು ಆ ಮನೆಯಲ್ಲಿದ್ದರೆ ಅವರ ಮಗಳ ಹೆಸರು ಕೆಡುತ್ತದೆಂದು ಉಖ್‌ಚಂದ್ ಪರೋಕ್ಷವಾಗಿ ಹೇಳಿದರು. ಎಲ್ಲರಿಗಿಂತ ಹೆಚ್ಚಾಗಿ ನನ್ನನ್ನು ಹೀನಾಮಾನವಾಗಿ ಕಂಡವರೆಂದರೆ ನನ್ನ ತಂದೆ. ಬೀನ್‌ಮಾಲಿನಲ್ಲಿ ಎಲ್ಲರೊಂದಿಗೆ ನಾನು ಐದು ವರ್ಷಗಳಿಂದಲೂ ಮಾನಸಿಕ ರೋಗಿ. ನನ್ನನ್ನು ನಂಬಬಾರದೆಂದು ಹೇಳಿಕೊಂಡು ತಿರುಗಿದರು. ಮುನಿಗಳು ಮತ್ತು ಸೇಠರು ಬಹಳ ಪ್ರಭಾವಶಾಲಿಗಳು. ಅವರಿಂದ ತನ್ನ ವ್ಯಾಪಾರ ಹಾಳಾಗಬಹುದೆಂದು ಹೆದರಿದ್ದರು" ಎಂದು ನಿಶಾ ಹೇಳುತ್ತಾಳೆ.

ತಂದೆ ಕಾಂತಿಲಾಲರು ತಮ್ಮ ಹೆಂಡತಿಯೊಂದಿಗೆ ಮಗಳನ್ನು ಅದೇ ರಾತ್ರಿ ದೀಸಾಗೆ ಕಳುಹಿಸುವ ವ್ಯವಸ್ಥೆ ಮಾಡುತ್ತಿದ್ದರು. ಇದನ್ನು ತಿಳಿದ ನಿಶಾ ತನ್ನ ತಾಯಿಯೊಂದಿಗೆ ಮನೆಬಿಟ್ಟು ಧರ್ಮಶಾಲೆಯೊಂದಕ್ಕೆ ಬಂದು ತಂಗಿದರು. ಮರುದಿನ ಮಗ ಲೋಕೇಶಿ, ಪತಿ ಮೆಹ್ತಾ ಅಲ್ಲಿಗೆ ಬಂದರು. ಅವರು ಪೋಲೀಸರಿಗೆ ದೂರು ಕೊಡುವುದನ್ನು ತಪ್ಪಿಸಲು ಮಫತ್‌ಲಾಲ್ ಮತ್ತವರ ಸಿಬ್ಬಂದಿಗಳು ಪ್ರಯತ್ನಿಸಿದರು. "ಇದನ್ನು ತಿಳಿದು ನಾನು ಕೋಪಗೊಂಡಿದ್ದೆ. ನನ್ನ ಹೆಂಡತಿಯ ಬೆಂಬಲಕ್ಕೆ ನಿಲ್ಲಲು ನಿರ್ಧರಿಸಿದ್ದೆ" ಎನ್ನುತ್ತಾರೆ ಪತಿ ಮೆಹ್ತಾ.

ಪತಿಪತ್ನಿಯರಿಬ್ಬರೂ ಜಾಲೋರ್ ಠಾಣೆಗೆ ಬಂದಾಗ ಸಂಜೆ 6 ಗಂಟೆ ಸೂಪರಿಂಟೆಂಡೆಂಟರಾದ ಹೇಮಂತ್ ಪ್ರಿಯದರ್ಶಿನಿ ತುಂಬಾ ಸಹಾನುಭೂತಿ ವ್ಯಕ್ತಪಡಿಸಿದರು. "ಇನ್ನೂ ಹಲವರು ಜೈನಮುನಿಗಳಿಂದ ಅತ್ಯಾಚಾರಕ್ಕೊಳಗಾಗಿದ್ದಾರೆ. ಆದರೆ ಯಾರೂ ದೂರು ಕೊಟ್ಟಿಲ್ಲ" ಎಂದರು. ನಿಶಾ ಹಾಕಿದ್ದ ಉಡುಪನ್ನು ಸಾಕ್ಷಿಗಾಗಿ ಪಡೆದರು. ದಂಪತಿಗಳಿಗೆ ಯಾರನ್ನು ನಂಬುವುದು, ಯಾರನ್ನು ನಂಬದಿರುವುದು ಎನ್ನುವುದೂ ತಿಳಿಯುತ್ತಿರಲಿಲ್ಲ. ತಾವು ಒಂದು ದೊಡ್ಡ ಪ್ರವಾಹದೆದುರು ಈಜುತ್ತಿರುವುದು ಮಾತ್ರ ಗೊತ್ತಿತ್ತು.

ದೂರು ದಾಖಲಾಗುತ್ತಲೇ ಲೋಖೇಂದ್ರನನ್ನು ಪೋಲೀಸರು ದಸ್ತಗಿರಿ ಮಾಡಿದರು. ಇದರಿಂದ ಉದ್ರಿಕ್ತರಾದ ಕೆಲವು ಗುಂಪುಗಳು ಪೋಲೀಸು ಠಾಣೆಗೆ ಕಲ್ಲು ತೂರಿದರು; ಭಾರೀ ಪ್ರತಿಭಟನೆ ಮಾಡಿದರು. ಸೆಪ್ಟೆಂಬರ್ 8ರಂದು ನ್ಯಾಯಾಲಯದಲ್ಲಿ ನಿಶಾ ಹೇಳಿಕೆ ನೀಡಿದಳು. ಸಿ.ಐ.ಡಿ. ಮರುದಿನ ವಿಚಾರಣೆ ನಡೆಸಿದರು. ಸೆಪ್ಟೆಂಬರ್ 10ರಂದು ಜೈಪುರದ ಪೋಲೀಸು ಕಮಿಷನರನ್ನು ಭೇಟಿ ಮಾಡಿದರು. ಅವರು ಇವರಿಗೆ ಮುಂಬೈಗೆ ಹೋಗಲು ಹೇಳಿದರು. ಅದೇ ಬೆಳಿಗ್ಗೆ ಲೋಖೇಂದ್ರ ಆಸಿಡ್ ಕುಡಿದು ಆಸ್ಪತ್ರೆಗೆ ಹೋಗುವ ಮಾರ್ಗದಲ್ಲಿ ಕೊನೆಯುಸಿರೆಳೆದಿದ್ದ.

ಸೆಪ್ಟೆಂಬರ್ 12ರ ಬೆಳಿಗ್ಗೆ ಮುಂಬೈಗೆ ಹಿಂತಿರುಗಿದ ಮೇಲೆ ಇವರಿಗೆ ಪೋಲೀಸು ರಕ್ಷಣೆ ನೀಡಲಾಯಿತು.

ಪ್ರಕರಣ ಗುಜರಾತೀ ದಿನಪತ್ರಿಕೆಯೊಂದರಲ್ಲಿ ಪ್ರಕಟವಾದ ನಂತರ ನಿಶಾಳಿಗೆ ಮೂವರು ಮಹಿಳೆಯರಿಂದ ದೂರವಾಣಿ ಕರೆಗಳು ಬಂದವು. ಅವರೆಲ್ಲಾ ಗೋರೆಗಾಂವ್, ಮಲಾಡ್ ಮತ್ತು ಭಯಂದರ್‌ನವರು. ಅವರೆಲ್ಲಾ ಲೇಖೇಂದ್ರ ಮತ್ತು ಲೋಖೇಂದ್ರರಿಂದ ಅತ್ಯಾಚಾರಕ್ಕೊಳಗಾಗಿದ್ದರಂತೆ. ಅದನ್ನು ತಮ್ಮ ಕುಟುಂಬದವರಿಗೂ ಹೇಳುವ ಧೈರ್ಯ ಅವರಿಗಿರಲಿಲ್ಲವಂತೆ.

"ನನಗೆ ಪಶ್ಚಾತ್ತಾಪವಿಲ್ಲ. ಆದರೆ ನನ್ನ ತಂದೆಯಿಂದ ನನ್ನ ಜೀವಕ್ಕೆ ಅಪಾಯವಿದೆಯೆಂಬ ಭಾವನೆ ನನಗಿದೆ. ನನಗೆ ನನ್ನ ಪತಿ ಮತ್ತು ಮಕ್ಕಳ ರಕ್ಷಣೆ ಮುಖ್ಯ. ನನಗೆ ಸಾವಿನ ಭಯವಿಲ್ಲ" ಎನ್ನುತ್ತಾಳೆ ನಿಶಾ ಲೋಖೇಂದ್ರನಿಗೆ ತಕ್ಕ ಶಿಕ್ಷೆ ಆಗಿದೆ ಎಂದವಳು ಭಾವಿಸುತ್ತಾಳೆ. ●

# ಗಾಯತ್ರಿಯ ಸಾವು ಆತ್ಮಹತ್ಯೆಯಲ್ಲ ಕೊಲೆ

"ವರಮಹಾಲಕ್ಷ್ಮಿ ಪೂಜೆಗೆ ಬರುವಳೆಂದು ನಿರೀಕ್ಷಿಸಿದ್ದ ಮಗಳು ಹಬ್ಬದ ಹಿಂದಿನ ದಿನವೇ ಹೆಣವಾಗಿ ಬಂದಳು...... ಮುಪ್ಪಿನಲ್ಲಿ ನಿನ್ನನ್ನು ನೋಡಿಕೊಳ್ಳುತ್ತೇನೆ ಎನ್ನುತ್ತಿದ್ದ ಮಗಳ ಹೆಣ ನಾನೇ ಕಾಣುವಂತಾಯಿತು" ಎಂದು ಬಿಕ್ಕುತ್ತಿದ್ದ ಇತ್ತೀಚೆಗೆ ಮೈಸೂರಿನಲ್ಲಿ ವರದಕ್ಷಿಣೆ ಸಾವಿಗೀಡಾದ ಗಾಯತ್ರಿಯು ತಾಯಿ ಮಂಜುಳಾಗೆ ಹೇಗೆ ಸಾಂತ್ವನ ನೀಡುವುದು? ಯಾರು ನೀಡಬಲ್ಲರು? 'ನನಗಿದ್ದವಳು ಒಬ್ಬಳೇ ಮಗಳು. ಇನ್ನೊಬ್ಬ ಮಗಳಿದ್ದಿದ್ದರೆ ಅವಳನ್ನು ನೋಡಿ ಇವಳನ್ನು ಮರೆಯುತ್ತಿದ್ದೆನೇನೋ" ಎನ್ನುವ ತಾಯಿಯ ಹೃದಯದ ಬೆಂಕಿ ಅಷ್ಟು ಸುಲಭವಾಗಿ ಆರುವುದೆ?

ಮೈಸೂರಿನ ಜ್ಯೋತಿ ನಗರದಲ್ಲಿ ವಾಸವಿರುವ ಮಂಜುಳಾರವರಿಗೆ ಗಾಯತ್ರಿ ಒಬ್ಬಳೇ ಮಗಳು. ಮತ್ತಿಬ್ಬರು ಗಂಡು ಮಕ್ಕಳು. 22 ವರ್ಷ ತುಂಬಿದ ಗಾಯತ್ರಿ ಬಿ. ಕಾಂ. ಪದವೀಧರೆ. ತುಂಬಾ ಧೈರ್ಯಶಾಲಿ. ರೂಪವತಿ. ಓದಿನಲ್ಲಿ ಜಾಣೆಯಾಗಿದ್ದ ಇವಳಿಗೆ ಪದವಿ ದೊರಕುತ್ತಿದ್ದಂತೆಯೇ ಮದುವೆ ಮಾಡಲು ತಂದೆ ತಾಯಿಗಳು ನಿರ್ಧರಿಸಿದರು. ಸಶಸ್ತ್ರ ಮೀಸಲು ಪಡೆಯಲ್ಲಿ ನೌಕರರಾಗಿರುವ ತಂದೆ ಮಗಳ ಮದುವೆಗೆಂದು ಒಡವೆಗಳನ್ನೆಲ್ಲಾ ಮೊದಲಿಂದಲೂ ಮಾಡಿಸಿಟ್ಟಿದ್ದರು. ವರನ ಅನ್ವೇಷಣೆಯೊಂದೇ ಬಾಕಿಯಿತ್ತು. ದೂರದ ಊರಿಗೆ ಮದುವೆ ಮಾಡಿದರೆ ಮಗಳನ್ನು ಪದೇ ಪದೇ ನೋಡಲಾಗುವುದಿಲ್ಲವೆಂದು ಹತ್ತಿರದ ವರನ ಹುಡುಕಾಟದಲ್ಲಿದ್ದಾಗ ಕಂಡವನು ಇವರ ಮನೆಗೆ ಹತ್ತಿರದ ಬಡಾವಣೆಯಲ್ಲಿನ ಆಲನಹಳ್ಳಿ ನಿವಾಸಿ ನೀಲಕಂಠರಾಯರ ಪುತ್ರ ಗೋಪಾಲ್. ಇವನು ಮೈಸೂರಿಗೆ ಹತ್ತಿರದ ಹುಣಸೂರಿನ ಹೊಗೆಸೊಪ್ಪು ಸಂಶೋಧನಾ ಸಂಸ್ಥೆಯ ಉದ್ಯೋಗಿ. ಹತ್ತಿರದಲ್ಲಿರುವವ ಎಂಬ ಒಂದೇ ಕಾರಣಕ್ಕಾಗಿ ಪಿಯುಸಿ ಮಾತ್ರ ಓದಿದವನಾದರೂ ಮಗಳಿಗೆ ತಕ್ಕ ವರ ಎಂದು ಭಾವಿಸಿ ಮದುವೆ ಮಾಡಲು ನಿರ್ಧರಿಸಿದರು ಗಾಯತ್ರಿಯ ತಂದೆ-ತಾಯಿ. ಮದುವೆ ಮಾತುಕತೆಯ ಸಂದರ್ಭದಲ್ಲೇ ಆಲನಹಳ್ಳಿಯಲ್ಲೇ ಇರುವ ತಮ್ಮ ಹೆಸರಿನ ನಿವೇಶನವೊಂದನ್ನು ಅಳಿಯನಿಗೆ ಕೊಡಲು ಒಪ್ಪಿದರು. ಎಲ್ಲಾ ವರೋಪಚಾರಗಳೊಂದಿಗೆ ದಿನಾಂಕ 25-9-96ರಂದು ಗಾಯತ್ರಿ ವಿವಾಹ ಗೋಪಾಲನೊಂದಿಗೆ ವಿಜೃಂಭಣೆಯಿಂದ ನಡೆಯಿತು.

ಮಗಳ ಮದುವೆಯೊಂದಿಗೇ ತಮ್ಮ ಕರ್ತವ್ಯ ಮುಗಿದ ನೆಮ್ಮದಿಯಿಂದಿದ್ದ ಗಾಯತ್ರಿಯ ತಂದೆ ತಾಯಿಗಳಿಗೆ ಮದುವೆಯಾದ ಎರಡು ತಿಂಗಳವರೆಗೆ ಯಾವುದೇ ಭ್ರಮನಿರಸನವಾಗದಂತೆ ಗಾಯತ್ರಿ ತವರುಮನೆ ಹಾಗೂ ಗಂಡನ ಮನೆಗಳೆರಡೂ ಕಡೆ ಓಡಾಡಿಕೊಂಡಿದ್ದಳು. ಆದರೆ ಈ ನೆಮ್ಮದಿ, ಸಂತಸ ಗಾಯತ್ರಿಗಾಗಲೀ, ಅವಳ ತಂದೆ ತಾಯಿಗಳಿಗಾಗಲೀ ಬಹುಕಾಲ ಉಳಿಯಲಿಲ್ಲ.

ಮದುವೆಯಾದ ಎರಡು ತಿಂಗಳಲ್ಲೇ ಗೋಪಾಲ ಹಾಗೂ ಅವನ ಮನೆಯವರ ವರ್ತನೆಗಳಲ್ಲಿ ಬದಲಾವಣೆ ಕಾಣತೊಡಗಿತು. 'ನಿನ್ನ ತಂದೆ ಕೇಳಿದಷ್ಟು ಬಂಗಾರ ಕೊಡಲಿಲ್ಲ. ಕೇಳಿದಷ್ಟು ಪಾತ್ರೆ ಕೊಡಲಿಲ್ಲ' ಎನ್ನುವ ದೂರು ಪರೋಕ್ಷವಾಗಿ ಕೊನೆ ಕೊನೆಗೆ ನೇರವಾಗಿ ಕೇಳಿಬರತೊಡಗಿತು. ಗಾಯತ್ರಿ ಮತ್ತವಳ ತಂದೆ ತಾಯಿಗಳನ್ನು ಚುಚ್ಚು ಮಾತುಗಳಿಂದ ನಿಂದಿಸುತ್ತಿದ್ದರು. ಇವನ್ನೆಲ್ಲಾ ತವರಿಗೆ ಬಂದಾಗ ಗಾಯತ್ರಿ ತಾಯಿಗೆ ಹೇಳಿಕೊಂಡು ಅಳುತ್ತಿದ್ದಳು. ಸಣ್ಣ ಪುಟ್ಟ ತಪ್ಪಿಗೆಲ್ಲಾ ಹೊಡೆತ, ಒದೆತ ತಿನ್ನುವುದೂ ಅವಳಿಗೆ ಅಭ್ಯಾಸವಾಗಿತ್ತು.

ಈ ಸಾರಿಯ ಆಷಾಢ ಮಾಸದಲ್ಲಿ ತವರಿಗೆ ಬಂದ ಗಾಯತ್ರಿ ತನ್ನ ಗಂಡನ ಮನೆಯವರ ಬೇಡಿಕೆಗಳನ್ನು ತನ್ನ ತಂದೆಗೆ ತಿಳಿಸಿದಳು. ಅದೆಂದರೆ, ತನ್ನ ಗಂಡನಿಗೆಂದು ಕೊಟ್ಟಿರುವ ನಿವೇಶನದ ದಾನಪತ್ರವನ್ನು ನೋಂದಣಿ ಮಾಡಿಸಬೇಕು. ಅದಕ್ಕೆ ಅಸ್ತಿಭಾರ ಹಾಕಲು 25 ಸಾವಿರ ಹಣ ಬೇಕು, ಇತ್ಯಾದಿ. ಇದನ್ನೆಲ್ಲಾ ಆದಷ್ಟು ಬೇಗ ತವರಿನಿಂದ ತರಬೇಕು. ಇವನ್ನೆಲ್ಲಾ ಈಡೇರಿಸುವ ಭರವಸೆ ನೀಡಿದ ತಂದೆ ವರಮಹಾಲಕ್ಷ್ಮಿ ಹಬ್ಬದ ಗಡುವು ನೀಡಿದರು.

ಮಗಳಿಗೆ ಮಾತನ್ನೇನೋ ಕೊಟ್ಟರು. ಆದರೆ ಹಣವೆಲ್ಲಿದೆ? ಮಗಳ ಮದುವೆಗಾಗಿ ಮಾಡಿದ ಸಾಲವೇ ಬಹಳವಿತ್ತು. ಆದರೆ ಈಗ ಮತ್ತೆ ಸಾಲ ಎತ್ತುವುದೇ ಅವರಿಗಿದ್ದ ಒಂದೇ ದಾರಿ. ಅವರಿವರನ್ನು ಹಣಕ್ಕಾಗಿ ಬೇಡಿದರು. ಸಿಗುವ ಭರವಸೆ ಮಾತ್ರ ಹುಟ್ಟಲಿಲ್ಲ.

ದಿನಾಂಕ 15ರಂದು ಹಬ್ಬ. 13ರಂದು ಮಗಳು ತಂದೆಯ ಕಛೇರಿಗೆ ಫೋನ್ ಮಾಡಿದಳು. ಆದರೆ ಅವರು ಕಛೇರಿಯಲ್ಲಿರಲಿಲ್ಲ. ನಂತರ ಬಂದ ಅವರಿಗೆ ಮಗಳು ದೂರವಾಣಿ ಕರೆ ಮಾಡಿದ ವಿಚಾರ ತಿಳಿಯಿತು. ಕೂಡಲೆ ಮಗಳ ಮನೆಗೆ ದೂರವಾಣಿ ಕರೆ ಮಾಡಿ ವಿಚಾರಿಸಿದಾಗ ಮಾವನಾದ ನೀಲಕಂಠರಾಯ ಅವಳು ಮನೆಯಲ್ಲಿಲ್ಲದ ವಿಷಯ ತಿಳಿಸಿದ.

'ಮಗಳನ್ನು ಹಬ್ಬಕ್ಕೆ ಮನೆಗೆ ಕಳುಹಿಸಿಕೊಡಿ' ಎಂದು ಕೇಳಿದ ತಂದೆಗೆ 'ಹೆಂಡತಿಗೆ ತಿಳಿಸುತ್ತೇನೆ' ಎನ್ನುವ ಉತ್ತರ ಬಂತು.

ಇಷ್ಟೆಲ್ಲಾ ನಡೆದ ನಂತರ ತಂದೆಗೆ ಮತ್ತೊಮ್ಮೆ ಮಗಳ ದೂರವಾಣಿ ಕರೆ ಬಂತು. ತನ್ನ ಗಂಡನ ಮನೆಗೆ ತಿಳಿಯದಂತೆ ತಂದೆಯೊಡನೆ ಮಾತಾಡಲು ಪ್ರಯತ್ನಿಸಿದ್ದ ಗಾಯತ್ರಿಗೆ ತನ್ನ ತಂದೆ ಅಲ್ಲಿಗೆ ಫೋನ್ ಮಾಡಿದ್ದ ವಿಷಯ ತಿಳಿದು ಗಾಬರಿಯಾಯಿತು. 'ನೀವೇಕೆ ಅಲ್ಲಿಗೆ ಸಂಪರ್ಕಿಸಿದಿರಿ? ನಾನು ಸಿಟಿಯಲ್ಲಿದ್ದೇನೆ. ಅವರಿನ್ನು ನನ್ನನ್ನು ಹಿಂಸಿಸುತ್ತಾರೆ' ಎಂದು ದೂರವಾಣಿಯಲ್ಲೇ ತನ್ನ ಕಳವಳವನ್ನು ವ್ಯಕ್ತಪಡಿಸಿದ್ದಳು. 'ತಾನು ಹಣದ ಬಗ್ಗೆ ಅವರಿಗೆ ಏನನ್ನೂ ತಿಳಿಸಿಲ್ಲ; ಏನೂ ಯೋಚಿಸಬೇಡ' ಎಂದು ತಂದೆ ಎಷ್ಟೇ ಹೇಳಿದರೂ ಅವಳು ಭಯದಿಂದಿದ್ದಳಂತೆ.

ಇದಾಗಿ ಕೇವಲ 24 ಗಂಟೆಗಳೊಳಗೆ ಅಂದರೆ ದಿನಾಂಕ 14ರಂದು ಮಧ್ಯಾಹ್ನ ಗಾಯತ್ರಿಯ ತಂದೆಯ ಕಛೇರಿಗೆ ಫೋನ್ ಕರೆ ಬಂತು. 'ಗಾಯತ್ರಿಗೆ ತುಂಬಾ ಸೀರಿಯಸ್, ನೀವು ಬನ್ನಿ' ಎನ್ನುವ ಸಂದೇಶ ಗಾಯತ್ರಿಯ ಓರಗಿತ್ತಿ ಲಲಿತಾಳಿಂದ ಬಂದಿತ್ತು. ಇವರು ಆ ಕೂಡಲೆ ಹೋಗಿ ನೋಡಿದಾಗ ಗಾಯಿತ್ರಿ ಹೆಣವಾಗಿದ್ದಳು. ಕೇಳಿದರೆ 'ನೇಣು ಹಾಕಿಕೊಂಡಳು' ಎಂಬ ಉತ್ತರ ಸಿಕ್ಕಿತು. ನೆಲದ ಮೇಲೆ ಮಲಗಿಸಿದ್ದ ಹೆಣದ ಮೇಲೆ ನೇಣು ಹಾಕಿಕೊಂಡಾಗ ಕಾಣಬಹುದಾದ ಯಾವುದೇ ಕುರುಹುಗಳು - ನಾಲಿಗೆ ಹೊರಚಾಚುವುದು, ಕಣ್ಣುಗುಡ್ಡೆ ಮೇಲೆ ಹೋಗಿರುವುದು, ಕತ್ತಿನ ಮೇಲೆ ಗಾಯ ಮುಂತಾದವು - ಕಾಣಲಿಲ್ಲವೆನ್ನಲಾಗಿದೆ. ಮೈಮೇಲೆ ಅಲ್ಲಲ್ಲಿ ಗಾಯದ ಗುರುತುಗಳು ಇದ್ದವು. ಎಡಗೈ 'ಬೇಡ, ಬೇಡ' ಎನ್ನುವಂತೆ ಮೇಲಕ್ಕೆತ್ತಿದ್ದು, ಎಡಗಾಲು ಮೇಲಕ್ಕೆ ಮಡಿಚಿಕೊಂಡಿತ್ತು ಎಂದು ಹೇಳಲಾಗಿದೆ. ಮಗಳ ಸಾವು ಅವಳ ಮೇಲೆ ನಡೆದ ದೈಹಿಕ ಹಿಂಸೆಯಿಂದಾಗಿದೆಯೇ ಹೊರತು ಆತ್ಮಹತ್ಯೆಯಲ್ಲ ಎನ್ನುವುದು ಗಾಯಿತ್ರಿಯ ತಂದೆ ತಾಯಿಗಳ ಅನಿಸಿಕೆ, ನಂಬಿಕೆ ಕೂಡ. ಅವರ ಈ ನಂಬಿಕೆಗೆ ಕೆಲವು ಸಾಕ್ಷ್ಯಾಧಾರಗಳನ್ನು ಅವರೇ ನೀಡುತ್ತಾರೆ.

ದಿನಾಂಕ 14ರಂದು ಅಂದರೆ ಗಾಯತ್ರಿಯ ಸಾವಿನ ದಿನ ಬೆಳಿಗ್ಗೆ ಸುಮಾರು 11ಗಂಟೆಯ ಸಮಯದಲ್ಲಿ ಹೆಣ್ಣೊಂದು ಜೋರಾಗಿ ಕಿರುಚಿದ ಸದ್ದು ಅಕ್ಕಪಕ್ಕದ ಮನೆಯವರಿಗೆ ಕೇಳಿಸಿತ್ತೆನ್ನಲಾಗಿದೆ. ಗಾಯತ್ರಿ ಸತ್ತ ಸ್ಥಳಕ್ಕೂ ಅಂದರೆ ಮಹಡಿಗೂ ಕೆಳಕ್ಕೂ ಮನೆಯವರೆಲ್ಲಾ ಅತಿಯಾಗಿ ಓಡಾಡುತ್ತಿದ್ದರೆಂದು ಕಂಡವರು ಹೇಳುತ್ತಾರೆ. ಅಲ್ಲದೆ ಗಾಯಿತ್ರಿಯ ಸಾವು ಬೆಳಿಗ್ಗೆಯೇ ಸಂಭವಿಸಿದ್ದರೂ ತಂದೆಗೆ ಈ ಸಂಗತಿ ತಿಳಿದದ್ದು ಮಧ್ಯಾಹ್ನ 3 ಗಂಟೆಗೆ! ಅವಳು ಸತ್ತು ಹಲವಾರು ಗಂಟೆಗಳು ಕಳೆದಿದ್ದರೂ 'ಸೀರಿಯಸ್' ಎಂದು ಮಾತ್ರ ಇವರಿಗೆ ತಿಳಿಸಲಾಗಿತ್ತು!

ಎಲ್ಲಕ್ಕಿಂತ ಮುಖ್ಯವಾಗಿ, ಗಾಯತ್ರಿಯ ಗಂಡ ಗೋಪಾಲ್ ಅಂದು ಬೆಳಿಗ್ಗೆ 10 ಗಂಟೆಗೆ ಹುಣಸೂರಿನ ತನ್ನ ಕಛೇರಿಗೆ ದೂರವಾಣಿ ಕರೆ ಮಾಡಿ ವೈಯಕ್ತಿಕ ಕಾರಣಕ್ಕಾಗಿ ತನಗೆ ರಜೆ ಬೇಕೆಂದು ಕೋರಿದನೆನ್ನಲಾಗಿದೆ. ತನ್ನ ಹೆಂಡತಿ ಸಾಯುವ ಮೊದಲೇ ಈ ರೀತಿ ರಜೆಗೆ ಕೋರಿದ್ದರೂ ಅಥವಾ ಸಾವಿನ ನಂತರವಾಗಿದ್ದರೂ ಅದಕ್ಕೆ ತನ್ನದೇ ಆದ ಕಾರಣಗಳನ್ನು ನೀಡಬಹುದು. ಇಷ್ಟಲ್ಲದೆ ಇದರ ಹಿಂದಿನ ದಿನ ಗೋಪಾಲ್ ತನ್ನ ಕಛೇರಿಯಲ್ಲಿ ತನಗೆ ಸಿಗರೇಟು ಸೇದುವ ಚಟವಿಲ್ಲದಿದ್ದರೂ ಸಿಗರೇಟು ಸೇದಿರುವುದು, ಕಛೇರಿ ಕೆಲಸದಲ್ಲಿ ಸ್ವಲ್ಪವೂ ಗಮನ ನೀಡದೆ ಇರುವುದು, ಸಹೋದ್ಯೋಗಿಗಳಲ್ಲಿ ಕೆಲವರೊಂದಿಗೆ 'ವರದಕ್ಷಿಣೆ ಸಾವು ಉಂಟಾದರೆ ಆಗುವ ಶಿಕ್ಷೆ ಎಂಥದು' ಎಂದು ವಿಚಾರಿಸಿರುವುದು ಬೆಳಕಿಗೆ ಬಂದಿದ್ದು ಗಾಯತ್ರಿಯ ಸಾವಿನಲ್ಲಿ ಗಂಡ ಗೋಪಾಲನ ಪಾತ್ರದ ಬಗ್ಗೆ ಹಲವು ಅನುಮಾನಗಳಿಗೆಡೆಮಾಡಿಕೊಟ್ಟಿವೆ.

'ಇವೆಲ್ಲದರ ಹಿನ್ನೆಲೆಯಲ್ಲಿ ಗಾಯತ್ರಿಯ ಸಾವು ಆತ್ಮಹತ್ಯೆಯಲ್ಲ, ಪೂರ್ವ ನಿಯೋಜಿತ ಕೊಲೆ. ಗಾಯತ್ರಿ ಆತ್ಮಹತ್ಯೆ ಮಾಡಿಕೊಳ್ಳುವವಳಲ್ಲ, ಧೈರ್ಯಶಾಲಿ. ಅವಳ ಮೇಲೆ ಅವಳ ಗಂಡ ಮಾತ್ರ ಹಲ್ಲೆ ನಡೆಸಿದ್ದರೂ ತಪ್ಪಿಸಿಕೊಂಡು ಬರುವ ಛಾತಿಯುಳ್ಳವಳು. ಅವಳ ಮನೆಯವರೆಲ್ಲರೂ ಸೇರಿ ಗಾಯಿತ್ರಿಯನ್ನು ಹಿಂಸಿಸಿ ಕೊಂದಿದ್ದಾರೆ' ಎನ್ನುತ್ತಾರೆ ಅವಳ ತಂದೆ ತಾಯಿ.

ಪೋಲೀಸರೇನೋ ಅಂದೇ ಗಾಯಿತ್ರಿಯ ಗಂಡ ಗೋಪಾಲ ಹಾಗೂ ಅತ್ತೆ ಅಶ್ವತ್ಥಮ್ಮನನ್ನು ಬಂಧಿಸಿದರು. ಪ್ರಕರಣವನ್ನು ಮಹಿಳಾ ಪೋಲೀಸ್ ಠಾಣೆಗೆ ವರ್ಗಾಯಿಸಲಾಯಿತು. ದಿನಾಂಕ 2-9-97ರಂದು ಮೈಸೂರಿನ ಸಮತಾ ಪ್ರಗತಿಪರ ಮಹಿಳಾ ವೇದಿಕೆ ಮತ್ತಿತರ ಸ್ಥಳೀಯ ಸಂಘಟನೆಗಳವರು ನ್ಯಾಯಾಲಯದ ಮುಂದೆ ಪ್ರತಿಭಟನೆ ನಡೆಸಿ, ಗೋಪಾಲ್ ಮತ್ತು ಅಶ್ವತ್ಥಮ್ಮನವರಿಗೆ ಯಾವುದೇ ಕಾರಣಕ್ಕೂ ಜಾಮೀನು ನೀಡಬಾರದು ಹಾಗೂ ಪ್ರಕರಣವನ್ನು ಸಿಓಡಿಗೆ ಒಪ್ಪಿಸಬೇಕು ಎಂಬ ಎರಡು ಬೇಡಿಕೆಗಳನ್ನು ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿದರಾದರೂ ಅಂದೇ ಅಶ್ವತ್ಥಮ್ಮನಿಗೆ ಜಾಮೀನು ದೊರಕಿದುದು ಆಡಳಿತ ಯಂತ್ರದ ನಿರ್ಲಕ್ಷ್ಯದಿಂದಾದ ಕಾನೂನಿನ ವೈಫಲ್ಯವೆನ್ನಬೇಕಾಗಿದೆ. ಗೋಪಾಲನ ಅಣ್ಣಂದಿರು, ಮತ್ತಿತರ ಸಂಬಂಧಿಕರು ಪೋಲೀಸು ಇಲಾಖೆಯ ನೌಕರರಾಗಿರುವುದು ಕೂಡ ಜಾಮೀನು ಸಿಗಲು ನೆರವಾಗಿರಬಹುದು ಎನ್ನುವುದು ಒಂದು

ಅನುಮಾನ. ಇದೇ ಕಾರಣದಿಂದಲೇ, ಈ ಪ್ರಕರಣ ಇಲಾಖೆಯಲ್ಲಿ ಕೊಲೆ ಎಂದಾಗದೆ ಆತ್ಮಹತ್ಯೆ ಎಂದು ದಾಖಲಾಗಿದೆ ಎನ್ನಲಾಗಿದೆ. ಈ ಪ್ರಕರಣದ ನ್ಯಾಯಯುತ ತನಿಖೆ ಒಂದು ಮರೀಚಿಕೆ ಎನ್ನುವುದು ಹಲವು ಸಂಘಟನೆಗಳ ಅಭಿಪ್ರಾಯವಾಗಿದೆ.

ಒಟ್ಟಿನಲ್ಲಿ ದಿನ ಬೆಳಗಾದರೆ ಇಂಥ ಹಲವು ಪ್ರಕರಣಗಳನ್ನು ಕಂಡು, ಕೇಳುತ್ತಿರುವ ನಾವು ನಮಗರಿವಿಲ್ಲದಂತೆ ಇಂಥ ಸುದ್ದಿಗಳಿಗೆ ಕಣ್ಣು ಕಿವಿಗಳನ್ನು ಮುಚ್ಚಿಕೊಂಡು ಜಡಭರತರ ಸ್ಥಿತಿಗೆ ತಲುಪುತ್ತಿರುವೆವೇನೋ ಎಂದು ಭಾಸವಾಗುತ್ತಿದೆ. ಅಲ್ಲಲ್ಲಿ ಪ್ರತಿಭಟನೆಗಳ ಕ್ಷೀಣ ಧ್ವನಿ ಕೇಳಿಬರುತ್ತಿರುವುದಾದರೂ ಅಪರಾಧಿಗಳು ಯಾವುದೇ ಕಾನೂನಿನ ಹಿಡಿತಕ್ಕೊಳಗಾಗದೆ ಬಿಡುಗಡೆ ಹೊಂದಿ ನಿರ್ಭಿಡೆಯಿಂದ ತಮ್ಮ ಯಥಾಸ್ಥಿತಿಗೆ ಮರಳುತ್ತಿರುವುದು, ಇಂಥದೇ ಪ್ರಕರಣಗಳು ಮತ್ತೆ ಮತ್ತೆ ಮರುಕಳಿಸುತ್ತಿರುವುದು ಪ್ರತಿಭಟನೆಯ ಕಾವಿಗೆ ತಣ್ಣೀರೆರೆಚುತ್ತಿದೆ ಮಾತ್ರವಲ್ಲ, ಹೆಣ್ಣು ಹೆತ್ತವರ ಸಂಕಟವನ್ನು ಇಮ್ಮಡಿ, ಮುಮ್ಮಡಿ, ನೂರ್ಮಡಿಗೊಳಿಸುತ್ತಲೇ ಅವರ ನೈತಿಕ ಸ್ಥೈರ್ಯ ಕುಸಿಯುವಂತೆ ಮಾಡಿದೆ. ಮಹಿಳೆಯರ ಮೇಲಿನ ಇಂಥ ದೌರ್ಜನ್ಯ - ಹಿಂಸಾಚಾರಗಳು ದಿನೇ ದಿನೆ ಹೆಚ್ಚುತ್ತಾ ಸಮಾಜದ ನೈತಿಕ ನೆಲೆಗಟ್ಟಿಗೆ ಸಡ್ಡು ಹೊಡೆಯುತ್ತಲೇ ಸವಾಲಾಗಿ ನಿಂತಿವೆ.

ಇತ್ತೀಚೆಗೆ ಸಮತಾ ಮಹಿಳಾ ಸಂಘಟನೆಯ ಹೋರಾಟದ ಫಲವಾಗಿ ಸದ್ಯಕ್ಕೆ ಗೋಪಾಲನನ್ನು ಅಮಾನತ್ತುಗೊಳಿಸಲಾಗಿದೆ.

- ವೆಂ. ವನಜ, ಮೈಸೂರು.

## ಗ್ರಾಮೀಣ ಮಹಿಳೆಯರ ದುಡಿಮೆ

ಭಾರತದ ಗ್ರಾಮೀಣ ಮಹಿಳೆಯರ ಬಗ್ಗೆ ಸಾಕಷ್ಟು ಅಧ್ಯಯನಗಳು, ಸಮೀಕ್ಷೆಗಳು ಹಾಗು ಸಂಶೋಧನೆಗಳು ನಡೆಯಬೇಕಾಗಿದೆ. ಆಗಲೆ ನಮಗೆ ಭಾರತದ ಮಹಿಳೆಯರ ಬಗ್ಗೆ ಒಂದು ನಿಲುವು ತಳೆಯಲು ಸಾಧ್ಯವಾಗುವುದು. ಭಾರತದಲ್ಲಿ ಒಟ್ಟು ಮಹಿಳಾ ಕೆಲಸಗಾರರಲ್ಲಿ ಶೇಕಡ 34.55ರಷ್ಟು ಮಹಿಳೆಯರು ಕೃಷಿಕರು. ಶೇಕಡ 43.56ರಷ್ಟು ಮಹಿಳೆಯರು ಕೃಷಿ ಕಾರ್ಮಿಕರು. ಶೇಕಡ 4.63ರಷ್ಟು ಮಹಿಳೆಯರು ಪಶು ಸಂಗೋಪನೆ, ಮೀನುಗಾರಿಕೆ, ಅರಣ್ಯೀಕರಣ ಮುಂತಾದವುಗಳಲ್ಲಿ ಕಂಡು ಬರುತ್ತಾರೆ. ಇದರಿಂದ ಕೃಷಿಯೆ ಮಹಿಳೆಯರಿಗೆ ಉದ್ಯೋಗ ನೀಡುವ ಪ್ರಮುಖ ಕ್ಷೇತ್ರವಾಗಿದೆ. ಶೇಕಡ 63ರಷ್ಟು ಪುರುಷರು ಕೃಷಿಯಲ್ಲಿ ಕೆಲಸ ಮಾಡುತ್ತಿದ್ದರೆ ಶೇಕಡ 78ರಷ್ಟು ಮಹಿಳೆಯರು ಕೃಷಿಯಲ್ಲಿ ಕೆಲಸ ಮಾಡುತ್ತಿದ್ದಾರೆ.

ಗ್ರಾಮೀಣ ಮಹಿಳೆಯರು ಮನೆ ಕೆಲಸ ಬಿಟ್ಟು ಬೇರೆ ಯಾವ ಯಾವ ರೀತಿಯ ಕೆಲಸ ಮಾಡುತ್ತಾರೆ, ಅದಕ್ಕೆ ಎಷ್ಟು ಸಮಯ ವ್ಯಯ ಮಾಡುತ್ತಾರೆ, ಕೂಲಿ ಎಷ್ಟು ಪಡೆಯುತ್ತಾರೆ ಮುಂತಾದ ವಿಷಯಗಳ ಬಗ್ಗೆ ನಮಗೆ ಅಂಕಿ ಅಂಶಗಳು ಸಿಗುವುದಿಲ್ಲ. ಇನ್ನೊಂದು ಮುಖ್ಯ ವಿಷಯವೆಂದರೆ ಹಳ್ಳಿ-ಹಳ್ಳಿಗಳಲ್ಲಿ ಮಹಿಳೆಯರು ಎಷ್ಟೆಲ್ಲ ಕೆಲಸ ಮಾಡುತ್ತಿದ್ದರೂ, ಅವರಿಲ್ಲದೆ ಹಳ್ಳಿಯ ಜೀವನವನ್ನು ನೆನೆಸಿಕೊಳ್ಳಲು ಸಾಧ್ಯವಿಲ್ಲದಿದ್ದರೂ ಹಿಂದಿ ಅಥವಾ ಭಾರತದ ಇನ್ನಾವುದೇ ಭಾಷೆಯಲ್ಲಿ ರೈತ ಮಹಿಳೆಗೆ ಅವಳನ್ನು ಗುರುತಿಸಲು ಪ್ರತ್ಯೇಕವಾದ ಪದ ಇಲ್ಲ. ಕೃಷಿಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಜಾರಿಗೆ ತಂದರೆ ಅವುಗಳಲ್ಲಿ ಮಹಿಳಾ ಫಲಾನುಭವಿಗಳು ಇರುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಯೋಜನಾ ಕ್ರಮಗಳಲ್ಲಿರುವ ಲಿಂಗ ಕುರುಡುತನ. ವ್ಯವಸಾಯದಲ್ಲೆ ದುಡಿಯುತ್ತಿದ್ದರೂ ಅವರಿಗೆ ಭೂಮಿ, ಸಾಲ, ಸೂಕ್ತ ತಂತ್ರಜ್ಞಾನ ತರಬೇತಿ ಮುಂತಾದವುಗಳನ್ನು ಪಡೆಯಲು ಸಾಧ್ಯವಾಗುವುದಿಲ್ಲ.

ಒರಿಸ್ಸಾದಲ್ಲಿ ಹಳ್ಳಿಯ ಹೆಂಗಸರು ವರ್ಷದಲ್ಲಿ 105.4 ದಿನಗಳು ಕೃಷಿ ಕೆಲಸ ಮಾಡಿದರೆ ಗಂಡಸರು 50.11 ದಿನಗಳು ಕೃಷಿ ಕೆಲಸ ಮಾಡುತ್ತಾರೆ. ಹಿಮಾಲಯ ಪ್ರದೇಶಗಳಲ್ಲಿ ಒಂದು ವರ್ಷದಲ್ಲಿ ಒಂದು ಹೆಕ್ಟೇರ್ ಜಮೀನಿನಲ್ಲಿ ಒಂದು ಜೋಡಿ ಎತ್ತು 1064 ಗಂಟೆಗಳು, ಗಂಡಸರು 1,212 ಗಂಟೆಗಳು ದುಡಿದರೆ ಹೆಂಗಸರು 3,485 ಗಂಟೆಗಳ ಕಾಲ ದುಡಿಯುತ್ತಾರೆ ಎಂದು ಸಂಶೋಧನಾ ವರದಿಯಿಂದ ತಿಳಿದು ಬಂದಿದೆ. ಒಂದು ಹೆಕ್ಟೇರ್ ಜಮೀನಿನಲ್ಲಿ ಮಹಿಳೆಯರು 640 ಗಂಟೆ ಕಳೆ ಕೀಳುವುದಕ್ಕೆ, 384 ಗಂಟೆ ನೀರು ಹಾಯಿಸುವುದಕ್ಕೆ, 650 ಗಂಟೆ ಗೊಬ್ಬರ ಸಿಂಪಡಿಸುವುದಕ್ಕೆ, 557 ಗಂಟೆ ಬಿತ್ತುವುದಕ್ಕೆ ಮತ್ತು 984 ಗಂಟೆಗಳನ್ನು ಕೊಯಿಲು ಮತ್ತು ಬಿತ್ತುವುದಕ್ಕೆ ವ್ಯಯ ಮಾಡುತ್ತಾರೆ. ಭತ್ತವನ್ನು ಹೆಚ್ಚಾಗಿ ಬೆಳೆಯುವ ಕೇರಳ, ತಮಿಳುನಾಡು, ಪಶ್ಚಿಮ ಬಂಗಾಳ, ಆಂಧ್ರ ಪ್ರದೇಶ ಮೊದಲಾದ ರಾಜ್ಯಗಳ ಕೃಷಿಯಲ್ಲಿ ಮಹಿಳೆಯ ಕೊಡುಗೆ ಅಪಾರವಾಗಿದೆ. ಹೀಗೆ ಕೃಷಿಯ ಮೂರನೇ ಎರಡು ಭಾಗದಷ್ಟು ಕೆಲಸವನ್ನು ಮಹಿಳೆಯರು ಮಾಡುತ್ತಾರೆ. ಆದರೆ ಅವರು ಬೇರೆ ಬೇರೆ ಸಾಮಾಜಿಕ, ಆರ್ಥಿಕ ಸಂದರ್ಭ, ವಾತಾವರಣದಲ್ಲಿ ಕೆಲಸ ಮಾಡುವುದರಿಂದ ಅವರ ಕೆಲಸದ ಪ್ರಮಾಣವನ್ನು ಅಳೆಯುವುದು ಕಷ್ಟವಾಗಿದೆ.

*ಸಂಗ್ರಹ: ಹೇಮಲತ ಎಚ್. ಎಂ., ಮೈಸೂರು.*

# ಬದುಕಿದ್ದರೂ 50ನೇ ವರ್ಷದ ಹುಟ್ಟು ಹಬ್ಬ ಆಚರಿಸಲಾಗದ ಅರುಣ

*[24 ವರ್ಷಗಳ ಹಿಂದೆ ಮುಂಬೈನ K.E.M. ಆಸ್ಪತ್ರೆಯಲ್ಲಿ ಅತ್ಯಂತ ಕ್ರೂರವಾಗಿ ಹಲ್ಲೆ ಮತ್ತು ಅತ್ಯಾಚಾರಕ್ಕೊಳಗಾದ ಅರುಣ್ ಶಾನ್‌ಬಾಗ್‌ಳ ಘಟನೆ ರಾಷ್ಟ್ರಮಟ್ಟದಲ್ಲಿ ಸುದ್ದಿ ಮಾಡಿತ್ತು. ಅರುಣ ಬದುಕಿ ಈಗ 50ನೇ ವರ್ಷಕ್ಕೆ ಕಾಲಿರಿಸಿದ್ದಾಳೆ. ಆದರೆ ಜೀವಂತ ಶವದಂತೆ ಬದುಕು ನಡೆಸುತ್ತಿದ್ದಾಳೆ].*

ನಮ್ಮ ದೇಶ ಸುವರ್ಣ ಸ್ವಾತಂತ್ರ್ಯವನ್ನು ಆಚರಿಸುತ್ತಿರುವ ಸಮಯದಲ್ಲೆ ಅರುಣ ಶಾನ್‌ಬಾಗಳು 50ನೇ ವರ್ಷಕ್ಕೆ ಕಾಲಿರುಸುತ್ತಿದ್ದಾಳೆ. ಕ್ಯಾಲೆಂಡರ್‌ನಲ್ಲಿ ಅವಳು 50ನೇ ವರ್ಷವನ್ನು ತಲುಪಿರುವ ದಾಖಲೆ ಬಿಟ್ಟರೆ ಅರುಣಳ ಜೀವನದಲ್ಲಿ ಯಾವುದೇ ಬದಲಾವಣೆಯಾಗಿಲ್ಲ. 24 ವರ್ಷಗಳ ಹಿಂದೆ ಅತ್ಯಾಚಾರಕ್ಕೊಳಗಾದಾಗಿನಿಂದ ಇವತ್ತಿನವರೆಗೆ ಗಾಯಗೊಂಡ ಪ್ರಾಣಿಯಂತೆ ಅರಚುವುದು ಬಿಟ್ಟರೆ ಅವಳಿಗಿನ್ನೇನು ಮಾಡಲಾಗುತ್ತಿಲ್ಲ. ಪ್ರಪಂಚದಲ್ಲಿ ಅರುಣ ಶಾನ್‌ಬಾಗ್‌ಳಂತ ಮತ್ತೊಂದು ಕೇಸ್ ಇರಲು ಸಾಧ್ಯವೇ? ಎನ್ನಿಸುತ್ತದೆ. 24 ವರ್ಷಗಳಿಂದ 24 ಗಂಟೆಗಳು ಅವಳ ಶರೀರ ಮತ್ತು ಮೆದುಳು ಸಮತೋಲನದಲ್ಲಿಲ್ಲದೆ ಘರ್ಷಣೆಗೊಳಗಾಗುತ್ತಿದೆ. ಅವಳ ಹೃದಯ ಮತ್ತು ಮನಸ್ಸು ಸಂಪೂರ್ಣವಾಗಿ ಮುಚ್ಚಿಹೋಗಿದೆ. ಪುರುಷರ ಧ್ವನಿ ಮತ್ತು ಪುರುಷರ ಸ್ಪರ್ಶವೆ ಅವಳಲ್ಲಿ ಭಯ ಹುಟ್ಟಿಸಿ ಕಿರುಚುವಂತೆ ಮಾಡುತ್ತದೆ. ವೈದ್ಯಕೀಯವಾಗಿ ಅವಳಿನ್ನು ಸತ್ತಿಲ್ಲ. ಅವಳು ಸುಖ ಮರಣವನ್ನು ಹೊಂದಲೂ ಸಾಧ್ಯವಿಲ್ಲ. ನಮ್ಮ ದೇಶದಲ್ಲೇನಾದರು ಜನರಿಗೆ ಜೀವನ ಮುಕ್ತಿ ನೀಡುವಂತಹ ಅವಕಾಶವನ್ನು ವೈದ್ಯರಿಗೆ ಕೊಡಲು ಕಾಯಿದೆ ಜಾರಿಗೆ ತಂದರೆ ಅರುಣಳಿಗೆ ಸಾವನ್ನು ಆಯ್ಕೆ ಮಾಡಿಕೊಳ್ಳುವ ಹಕ್ಕು ಕೂಡ ಇಲ್ಲದಂತಾಗಿದೆ.

1973, ನವೆಂಬರ್ 27, 26 ವರ್ಷದ ಅರುಣ ಶಾನ್‌ಬಾಗ್‌ಳ ಜೀವನದ ಕೊನೆಯ ದಿನವಾಗಿತ್ತು. ಆ ದಿನ ಅವಳು KEM ಆಸ್ಪತ್ರೆಯಲ್ಲಿ ಮಿಥಾಯ್ ವಿಷದ ಕಲಬೆರಕೆಗೆ ಸಂಬಂಧಪಟ್ಟ ಪ್ರಯೋಗದಲ್ಲಿ ಕೆಲಸ ಮಾಡುತ್ತಿದ್ದಳು. ರಾತ್ರಿ ತುಂಬ ಹೊತ್ತಾದ್ದರಿಂದ ನರ್ಸ್ ಕ್ವಾರ್ಟರ್ಸ್‌ನಲ್ಲಿ ಉಳಿಯಲು ನಿರ್ಧರಿಸಿದಳು. ಹಿಂದೆಯು ಹೀಗೆ ಹೊತ್ತಾದರೆ ಕ್ವಾರ್ಟರ್ಸ್‌ನಲ್ಲಿ ಉಳಿಯುತ್ತಿದ್ದುದರಿಂದ ಅವಳ ಮನೆಯವರು ಚಿಂತಿಸಲಿಲ್ಲ. ಮಲಗಲು ಹೋಗಲೆಂದು ಕಾರ್ಡಿಯೋ ವಸ್ಕಲರ್ ಥೊರಾರಕ್ ಸೆಂಟರ್ (CVTC) ಕಡೆ ನಡೆದುಕೊಂಡು ಹೋದಳು. ಅದೇ ಅವಳ ಜೀವನದ ಕೊನೆ ನಡಿಗೆಯಾಗಿತ್ತು. ಆಗಿನ್ನು ಮಧ್ಯರಾತ್ರಿ ಕೂಡ ಆಗಿರಲಿಲ್ಲ.

ಮರು ಬೆಳಿಗ್ಗೆ ಎಂಟು ಗಂಟೆ ಹೊತ್ತಿಗೆ ಮೇಟ್ರನ್ ಬೆಳ್ಳಿಮಾಲ್‌ಗೆ ದಿಗ್ಭ್ರಾಂತಿ ಹುಟ್ಟಿಸುವಂತಹ ಸುದ್ದಿ ಬಂತು. ಕಸಗುಡಿಸುವವನು ಕಸಗುಡಿಸಲು CVTCಗೆ ಹೋದಾಗ ಅಲ್ಲಿ ಹರಿದ ಬಿಳಿ ಬಟ್ಟೆಯಿಂದ ಆವರಿಸಲ್ಪಟ್ಟ ಹೆಂಗಸನ್ನು ನೋಡಿದಾಗಿ ಹೇಳಿದನು. ಅವಳು ಅರುಣ ಶಾನ್‌ಬಾಗ್ ಆಗಿದ್ದಳು. ಅವಳ ಕುತ್ತಿಗೆಯ ಸುತ್ತ ನಾಯಿ ಸರಪಳಿಯನ್ನು ಬಿಗಿಯಲಾಗಿತ್ತು.

ಮೇಟ್ರನ್ ಬೆಳ್ಳಿಮಾಲ್ ಆ ದಿನವೇ ಪ್ರಮೀಳ ಕುಶೆಗೆ ಕೆಲಸದ ಅಧಿಕಾರವನ್ನು ವಹಿಸಿಕೊಡಬೇಕಾದಿದ್ದರಿಂದ ಆ ದಿನದ ಬೆಳಿಗ್ಗೆ ಅವಳಿಗೆ ಚೆನ್ನಾಗಿ ನೆನಪಿತ್ತು. ಹಲವು ವರ್ಷಗಳ ಹಿಂದೆ ಪ್ರಮಿಳ ಕುಶೆ ಆ ಬೆಳಿಗ್ಗೆ ಬಗ್ಗೆ ಈ ರೀತಿ ಹೇಳಿದ್ದರು "ಮೇಟ್ರನ್ ಬೆಳ್ಳಿಮಾಲ್ ಅರುಣಳ ಹೆಸರನ್ನು ಕರೆಯುತ್ತ ಅವಳ ಹತ್ತಿರ ಹೋದರೆ ಅರುಣ ಅಲ್ಲಾಡಲೇ ಇಲ್ಲ. ನೆಲದ ಮೇಲೆ ಅಸ್ತವ್ಯಸ್ತವಾಗಿ ಬಿದ್ದಿದ್ದಳು. ಕಣ್ಣು ದೊಡ್ಡದಾಗಿ ತೆರೆದಿತ್ತು. ಬೆಳ್ಳಿಮಾಲ್ ಮೆಲು ದನಿಯಲ್ಲಿ ಅರುಣ ಅರುಣ ಏನಾಯಿತು, ಚಿಂತಿಸಬೇಡ ಎಲ್ಲಾ ಸರಿಹೋಗುತ್ತೆ ಎಂದು ಹೇಳಿ ಅವಳ ಭುಜವನ್ನು ಮುಟ್ಟಿದಾಗ, ಅರುಣ ತಲೆಯೆತ್ತಿ ಬೆಳ್ಳಿಮಾಲತ್ತ ನೋಡಿದಳು. ನೋಡುತ್ತಿರುವಂತೆಯೆ ಅವಳ ಮುಖದ ಮೇಲೆ ಕಣ್ಣೀರು ಹರಿಯಲಾರಂಭಿಸಿತು. ನಂತರ ಅವಳ ಕಣ್ಣುಗಳು ಮೇಲೆ ತಿರುಗಿ ಶರೀರ ಕುಸಿದು ಬಿದ್ದಿತು. ಹಾಗೆ ಕುಸಿದು ಬಿದ್ದ ಅರುಣ ಸುಮಾರು ಮೂರು ವರ್ಷ ಕೋಮದಲ್ಲಿದ್ದಳು".

ಇಂತಹ ಘೋರ ಕೃತ್ಯವೆಸಗಿದ ಸೋಹನ್‌ಲಾಲ್ ಭರತನಿಗೆ 7 ವರ್ಷಗಳ ಸಜೆಯಾಯಿತು. ಸೋಹನ್‌ಲಾಲ್ KEM ಆಸ್ಪತ್ರೆಯಲ್ಲಿ ಶೌಚಾಲಯವನ್ನ ಸ್ವಚ್ಛಗೊಳಿಸುವವನು. ಅತ್ಯಾಚಾರ ಮಾಡಿದ ನಂತರ ಅವಳ ಸರ ಮತ್ತು ಎಂಗೇಜ್‌ಮೆಂಟ್ ಉಂಗುರವನ್ನು ಎತ್ತಿಕೊಂಡು ಹೋಗಿದ್ದನು. ಅರುಣ ತನ್ನ ಜೊತೆ ಸರಿಯಾಗಿ ಮಾತನಾಡದಿದ್ದುದರಿಂದ ತಾನು ಈ ರೀತಿ

ಮಾಡಿದೆನೆಂದು ಸೋಹನ್‌ಲಾಲ್ ಪೋಲೀಸರ ಬಳಿ ಹೇಳಿದನು. ಆಸ್ಪತ್ರೆಯಲ್ಲಿ ನಾಯಿಗಳ ಮೇಲೆ ನಡೆಯುತ್ತಿದ್ದ ಪ್ರಯೋಗಲ್ಲಿ ಸಹಾಯ ಮಾಡುತ್ತಿದ್ದುದರಿಂದ ತನ್ನನ್ನು ಪರೀಕ್ಷಿಸಿಕೊಳ್ಳಲು ಅರುಣ CVTCಗೆ ಬಂದೇ ಬರುತ್ತಾಳೆಂದು ಅವನಿಗೆ ಗೊತ್ತಿತ್ತು. ಅವಳು ಕಿರುಚದಂತೆ ಮಾಡಲು ನಾಯಿ ಸರಪಳಿಯನ್ನು ಅವಳ ಕುತ್ತಿಗೆಗೆ ಗಟ್ಟಿಯಾಗಿ ಬಿಗಿದನು. ಎಷ್ಟು ಜೋರಾಗಿ ಬಿಗಿದಿದ್ದಾನೆಂದರೆ ಅದು ಅವಳ ಮಿದುಳಿಗೆ ಆಕ್ಸಿಜನ್ ಪೂರೈಸುವ ಕ್ರಿಯೆಯನ್ನೇ ಸಂಪೂರ್ಣವಾಗಿ ನಿಲ್ಲಿಸಿತು. ಜೊತೆಗೆ ಮೆದುಳಿನ ಸೆಲ್‌ಗಳನ್ನು ಸಾಯಿಸಿತ್ತು. ಇದರ ಪರಿಣಾಮ ಎಷ್ಟು ಘೋರವಾಗಿತ್ತೆಂದರೆ ವೈದ್ಯಕೀಯ ಕ್ಷೇತ್ರದ ಯಾವುದೇ ಅದ್ಭುತ ಪ್ರಗತಿ ಸಂಶೋಧನೆ ಔಷಧಿಯು ಈ ಕ್ರೂರ ಪರಿಣಾಮವನ್ನು ಹೋಗಲಾಡಿಸಲು ಸಾಧ್ಯವಾಗಲಿಲ್ಲ.

ಮೂರು ವರ್ಷಗಳ ನಂತರ ಅರುಣ ಕೋಮಾದಿಂದ ಹೊರಬಂದಾಗ ಒಂದು ಸಣ್ಣ ಆಶಾಕಿರಣ ಮೂಡಿ ಬಂತು. ಆದರೆ ಮೇಟ್ರನ್ ಕುಶೆ ಹೇಳುವಂತೆ "ಅವಳು ತನ್ನ ಭಾವಿ ಪತಿಯನ್ನು ಗುರುತಿಸಲಿಲ್ಲ. ಈ ಘಟನೆ ನಡೆದಾಗ ಅವಳಿಗೆ ಮದುವೆ ನಿಶ್ಚಯವಾಗಿತ್ತು. ಅವನು ಪ್ರತಿ ದಿನ ಆಸ್ಪತ್ರೆಗೆ ಬಂದು ಅವಳ ಜೊತೆ ಮಾತನಾಡುತ್ತಾ ಅವಳು ಆ ಪರಿಸ್ಥಿತಿಯಿಂದ ಹೊರಬರಲು ಉತ್ತೇಜನ ನೀಡುತ್ತಿದ್ದನು. ಅವನೂ ಡಾಕ್ಟರಾದ್ದರಿಂದ ಅವಳಿಗೆ ಪಿಸಿಯೊಥೆರಪಿ ನೀಡುತ್ತಿದ್ದ. ಅವಳನ್ನು ಸುಧಾರಿಸಲು ಸರ್ವ ಪ್ರಯತ್ನ ಮಾಡಿದ. KEM ಆಸ್ಪತ್ರೆ ಬಿಟ್ಟು ಮದುವೆಯಾಗಿ ಮಕ್ಕಳಾದ ಮೇಲೂ ಆಸ್ಪತ್ರೆಗೆ ಬಂದು ಅರುಣಳನ್ನು ನೋಡಿಕೊಂಡು ಹೋಗುತ್ತಿದ್ದ. ಆದರೆ ಅವಳ ಕುಟುಂಬದವರು ಆಸ್ಪತ್ರೆಯವರಿಗೆ ತಿಳಿಸದೆ ಮನೆ ಬದಲಾಯಿಸಿಕೊಂಡು ಹೋದಾಗ ಅರುಣಳಿಗೆ ಯಾರು ದಿಕ್ಕಿಲ್ಲದಾದರು. ಅರುಣಳ ಸಹದ್ಯೋಗಿಗಳು ಆಸ್ಪತ್ರೆಯಲ್ಲೆ ಅವಳಿಗೆ ಆಶ್ರಯ ಸಿಗುವಂತೆ ಮಾಡಿದರು. ಆಸ್ಪತ್ರೆಯವರು ಎಲ್ಲಾ ಕಡೆಯಿಂದ ವಿಶೇಷ ತಜ್ಞರನ್ನು ಕರೆಸಿ ಏನೆಲ್ಲ ಟ್ರೀಟ್‌ಮೆಂಟ್ ಕೊಡಿಸಿದರು ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ಅರುಣಳನ್ನು 'ಪುನರ್‌ವಸತಿ ಕೇಂದ್ರಕ್ಕೆ' ಸೇರಿಸಬೇಕೆಂದು ನಿರ್ಧರಿಸಲಾಯಿತು. ಆದರೆ ಅವಳ ಸಹೋದ್ಯೋಗಿಗಳು ವಿರೋಧಿಸಿದ್ದರಿಂದ ಆಸ್ಪತ್ರೆಯವರು ತಮ್ಮ ನಿರ್ಧಾರ ಕೈಬಿಡಬೇಕಾಯಿತು. ಇವತ್ತು KEM ಆಸ್ಪತ್ರೆಯ ವಾರ್ಡ್ 7 ಅರುಣಳ ಕುಟುಂಬವಾಗಿದೆ. 24 ವರ್ಷಗಳಿಂದ ಆಸ್ಪತ್ರೆಯೇ ಅವಳ ಮನೆಯಾಗಿದೆ. ಅದೃಷ್ಟವಶಾತ್ ಅರುಣ ತನಗೆ ಗೊತ್ತಿಲ್ಲದಂತೆ ಆಸ್ಪತ್ರೆಯಲ್ಲಿ ಒಬ್ಬ ಒಳ್ಳೆ ಸ್ನೇಹಿತೆಯನ್ನು ಪಡೆದಳು. ಅವರೇ ಮಹಾರಾಷ್ಟ್ರದ ಮೊಟ್ಟ ಮೊದಲ ಮಹಿಳಾ ಡೀನ್ ಮತ್ತು ಏಷ್ಯಾದಲ್ಲೆ ಅತ್ಯಂತ ದೊಡ್ಡ ಆಸ್ಪತ್ರೆಯನ್ನು ನಡೆಸುತ್ತಿರುವ ಡಾ. ಪ್ರಜ್ಞ ಪೈ. ಈಗಲು ಅವರು ಅರುಣಳನ್ನು ಹಿಂದಿನ ಸ್ಥಿತಿಗೆ ತರಲು ಪ್ರಯತ್ನ ನಡೆಸುತ್ತಲೆ ಇದ್ದಾರೆ. ಡಾ. ಪೈ ಅರುಣಳನ್ನು ನೋಡಿಕೊಳ್ಳುವುದರಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿದರು. ಅವಳ ರೂಮಿನ ಕಿಟಕಿಗಳಿಗೆ ಬಿಳಿ ಪರದೆ ಹಾಕಿಸಿ, ಗೋಡೆಗಳ ಮೇಲೆ ಬಣ್ಣದ ಚಿತ್ರಗಳನ್ನು ಹಾಕಿಸಿದರು. ವಿಶೇಷ ತರಬೇತಿ ಹೊಂದಿದ ನರ್ಸ್‌ಗಳನ್ನು ನೇಮಿಸಿ ಅವಳಿಗೆ ಏನಾದರು ಓದಿ ಹೇಳುವಂತೆ ಮಾಡಿದರು. ಆಸ್ಪತ್ರೆಯ ತೋಟದಲ್ಲಿ ಗಾಲಿ ಕುರ್ಚಿಯಲ್ಲಿ ಸುತ್ತಾಡಿಸುವ ಏರ್ಪಾಡು ಮಾಡಿದರು. ಅರುಣ ಅಪರಿಚಿತರು ಬಂದರೆ ಹೆದರುತ್ತಿದ್ದಳು. ಪ್ರತಿ ದಿನ ಬೆಳಿಗ್ಗೆ ಅವಳ ಕೊಠಡಿಯಲ್ಲಿ ಹಾಡುಗಳನ್ನು ಹಾಕುವಂತೆ ಸಲಹೆ ಮಾಡಿದರು.

17 ವರ್ಷಗಳ ನಂತರ ಮೊದಲ ಬಾರಿಗೆ ನಕ್ಕಳು. ಈ 24 ವರ್ಷಗಳಲ್ಲಿ ಇದೊಂದೆ ಸಲ ಅವಳು ನಕ್ಕಿರುವುದು. ರೇಡಿಯೋದಲ್ಲಿ ಮರಾಠಿ ಗೀತೆಯೊಂದನ್ನು ಕೇಳಿಸಿದಾಗ ಅರುಣಾಳ ಮುಖದಲ್ಲಿ ಶಾಂತಿ ಮೂಡಿ ಬಂದು ಒಮ್ಮೆ ಮುಗುಳ್ ನಕ್ಕಳು. ಆದರೆ ಹಾಡು ನಿಂತು ಒಬ್ಬ ಗಂಡಸಿನ ಧ್ವನಿ ಕೇಳಿ ಬಂದಾಗ ತಕ್ಷಣ ಹೆದರಿಕೆಯಿಂದ ಕಿರುಚಲು ಪ್ರಾರಂಭಿಸಿದಳು ಎಂದು ಮೇಟ್ರನ್ ಕುಶೆ ಹೇಳಿದರು. ಹೀಗೆ ಹಲವಾರು ವರ್ಷಗಳಿಂದ ಅರುಣ ಕೇವಲ ಹಿಸ್ಟೀರಿಕ್ ಆಗಿ ನಗುವುದು ಇಲ್ಲ ಮರಣಯಾತನೆಯಂತೆ ಕಿರುಚುವುದರಲ್ಲೆ ದಿನಗಳನ್ನು ಕಳೆಯುತ್ತಿದ್ದಾಳೆ.

ಈಗ ಸಿಸ್ಟರ್ ಭಕಿ ಕುಬಲ್ ಅರುಣಳನ್ನು ನೋಡಿಕೊಳ್ಳುತ್ತಿದ್ದಾರೆ. ಸ್ನಾನ ಮಾಡಿಸಲು ಕರೆದುಕೊಂಡು ಹೋಗಲು ಗಾಲಿ ಕುರ್ಚಿಯಲ್ಲಿ ಕೂರಿಸಲು ಯಾರಾದರು ಗಂಡಸರನ್ನು ಸಹಾಯಕ್ಕೆ ಕರೆದರೆ ಕಿರುಚಾಡಲು ಪ್ರಾರಂಭಿಸುತ್ತಾಳೆ. ಪರಿಚಯವಿಲ್ಲದ ಸ್ವರ ಕೇಳಿದರೆ ಅಳುವುದಕ್ಕೆ ಶುರು ಮಾಡುತ್ತಾಳೆ. ಅವಳ ಹಾಸಿಗೆ ಸಿದ್ಧಪಡಿಸುವುದು, ಮಲಗಿಸುವುದು, ಬೆರಳುಗಳಿಗೆ ಎಣ್ಣೆ ಹಚ್ಚುವುದು, ಉಗುರು ಕತ್ತರಿಸುವುದು, ಬಟ್ಟೆ ಹಾಕುವುದು ಎಲ್ಲವನ್ನೂ ಸಿಸ್ಟರ್ ಭಕ್ತಿ ಕುಬಲ್ ಮಾಡುತ್ತಾರೆ. ಅವಳಿಗಾಗೆ ತಯಾರಿಸಿದ ಬಟ್ಟೆಯಿಂದ ಡಾ. ಪೈ ಪೈಜಾಮಗಳನ್ನು ಹೊಲಿಸಿದ್ದಾರೆ. ಏನು ಕೊಟ್ಟರು ತಿನ್ನುತ್ತಾಳೆ. ಬೇಳೆಯನ್ನು ಇಷ್ಟಪಡುವುದಿಲ್ಲ. ಆದರೆ ಆಮ್ಲೆಟ್, ಮೀನಿನ ಸಾರು ಮತ್ತು ಅನ್ನ ಹಾಗು ಮಾವಿನ ಹಣ್ಣನ್ನು ಇಷ್ಟಪಡುತ್ತಾಳೆ.

ಪ್ರತಿ ದಿನದ ಕೆಲಸ ಮತ್ತು ಊಟ ನೀಡಿದ ನಂತರ ಅವಳ ಕೊಠಡಿಯ ಬಾಗಿಲನ್ನು ಮುಚ್ಚಲಾಗುತ್ತದೆ. ಇದು ಪ್ರಾರಂಭವಾಗಿದ್ದು ಸೋಹನ್‌ಲಾಲ್ 7 ವರ್ಷಗಳ ನಂತರ ಜೈಲಿನಿಂದ ಬಿಡುಗಡೆ ಹೊಂದಿ ಹೊರ ಬಂದ ನಂತರ ಅರುಣಾಳನ್ನು ನೋಡಲೆಂದು ಆಸ್ಪತ್ರೆಗೆ ಬಂದು ಕದ್ದು ನೋಡಲು ಪ್ರಾರಂಭಿಸಿದರಿಂದ ಅವಳ ಕೊಠಡಿಯ ಬಾಗಿಲನ್ನು ಮುಚ್ಚಲು ಪ್ರಾರಂಭಿಸಿದರು. ಅವನು ಹೆಸರು ಬದಲಾಯಿಸಿಕೊಂಡು ಬೇರೆ ಆಸ್ಪತ್ರೆಯಲ್ಲಿ ವಾರ್ಡ್‌ಬಾಯ್ ಆಗಿ ಕೆಲಸ ಮಾಡುತ್ತಿದ್ದಾನೆಂದು ಕೆಲವರು ಹೇಳಿದರೆ ಮತ್ತೆ ಕೆಲವರು ಸತ್ತು ಹೋಗಿದ್ದಾನೆ ಎಂದು ಹೇಳುತ್ತಾರೆ. ಅವನೆಲ್ಲೆ ಇರಲಿ ಅವನು ತನ್ನ ಕೆಟ್ಟ ಕೆಲಸಕ್ಕೆ ಬೆಲೆ ತೆತ್ತಿರಲೇಬೇಕು.

ಈ ಅತ್ಯಾಚಾರ ನಡೆದ ನಂತರ ಅದನ್ನು ಆಧಾರವಾಗಿಟ್ಟುಕೊಂಡು ಗುಜರಾತಿನ ಪ್ರಸಿದ್ಧ ಸಂಪಾದಕ ಹರಿಕಿಶನ್ ಬಾಯ್ ಮೆಹ್ತ ಅವರು 100 ಅಧ್ಯಾಯಗಳುಳ್ಳ 'ತುಳಸಿ' ಎಂಬ ಕಾದಂಬರಿಯನ್ನು ಬರೆದರು. ಈ ಕಾದಂಬರಿಯ ಆಧಾರಿತವಾಗಿ ಅರುಣಾಳ ಕಥೆಯು ದೂರದರ್ಶನದ ಧಾರಾವಾಹಿಯಾಗಿ ಪರಿವರ್ತನೆಗೊಂಡಿದೆ. ಓದುಗರ ಒತ್ತಾಯದ ಮೇರೆಗೆ ಲೇಖಕರು ಕಾದಂಬರಿಯ ಕೊನೆಯಲ್ಲಿ ಅವಳು ಗುಣಮುಖಿ ಹೊಂದಿ ಆಸ್ಪತ್ರೆಯಿಂದ ಹೊರಬರುವಂತೆ ಚಿತ್ರಿಸಿದ್ದಾರೆ. ಆದರೆ ಅಂತಹ ಒಂದು ಪವಾಡ ಅರುಣಾಳ ಜೀವನದಲ್ಲಿ ಸಾಧ್ಯವೆ? ಬದಲಾಗುತ್ತಿರುವ ಈ ಪ್ರಪಂಚದಲ್ಲಿ ಕಾಲಿಡಲು ಈ ರೀತಿಯ ಪವಾಡ ಅವಳಿಗೆ ಬೇಕಾಗಿದೆಯೆ? ಎನ್ನುವ ಪ್ರಶ್ನೆ ಏಳುತ್ತದೆ.

ಅರುಣಾಳನ್ನು ಈ ಬಂಧನದಿಂದ ಮುಕ್ತಳನ್ನಾಗಿ ಮಾಡಲು ಏನು ಮಾಡಬೇಕು ಅನ್ನುವ ಪ್ರಶ್ನೆಗೆ ಅವಳಿಗಾಗಿ ಪ್ರಾರ್ಥನೆ ಮಾಡುವುದೊಂದೆ ದಾರಿ ಎನ್ನುತ್ತಾರೆ ಡಾ. ಪೈ.

ಆಧಾರ - Times of India

## ಬಲಾತ್ಕಾರ ಸಂತಾನ ಶಸ್ತ್ರ ಚಿಕಿತ್ಸೆ

ಜನಸಂಖ್ಯೆ ನಿಯಂತ್ರಣ, ಅದರ ಪಾಲನೆಗಳಿಗೆ ಅಂತಿಮವಾಗಿ ಬಲಿಪಶುಗಳಾಗುವವರು ಮಹಿಳೆಯರು. ಇದು ವಿಶ್ವದಾದ್ಯಂತ ನಡೆಯುತ್ತಿದೆ. 1949ರಿಂದ 1995ರ ನಡುವೆ ಜಪಾನಿನಲ್ಲಿ ಸ್ತ್ರೀಯರ ಮೇಲೆ ಬಲಾತ್ಕಾರವಾಗಿ ಸಂತಾನ ಹರಣ ಶಸ್ತ್ರ ಚಿಕಿತ್ಸೆಯನ್ನು ನಡೆಸಲಾಯಿತು. ಆಗ ಜಾರಿಯಲ್ಲಿದ್ದ ಕಾನೂನಿನ ಸಮ್ಮತಿಯಿಂದ ನಡೆದುದರ ಪ್ರಯುಕ್ತ ಈ ಬಲಾತ್ಕಾರ ಶಸ್ತ್ರ ಚಿಕಿತ್ಸೆಯನ್ನು ಅಧಿಕಾರಿಗಳು ಸಮರ್ಥಿಸಿಕೊಂಡರು.

ಮಹಿಳೆಯರು ಹಾಗೂ ಅಂಗವಿಕಲ ಮಹಿಳೆಯರನ್ನು ಒಳಗೊಂಡ 17 ನಾಗರೀಕ ಸಂಘಟನೆಗಳು ಈ ಬಲಾತ್ಕಾರ ಶಸ್ತ್ರ ಚಿಕಿತ್ಸೆಯನ್ನು ಪ್ರತಿಭಟಿಸಿದ್ದಲ್ಲದೆ, ವಿಚಾರಣೆಯನ್ನು ನಡೆಸಬೇಕೆಂಬ ಬೇಡಿಕೆಯನ್ನು ಮುಂದಿಟ್ಟಿದ್ದವು. ತಮ್ಮ ಒಪ್ಪಿಗೆ ಕುರಿತು ಆಗಾಗ ಮಹಿಳೆಯರು ಸಾರ್ವಜನಿಕವಾಗಿ ಹೇಳಿಕೆ ನೀಡುತ್ತಲೇ ಬಂದಿದ್ದರು.

ಸ್ವೀಡನ್‌ನಲ್ಲಿ ಸಹ 60,000 ಸ್ತ್ರೀಯರ ಮೇಲೆ ಅವರ ಒಪ್ಪಿಗೆಯನ್ನು ಪಡೆಯದೇ ಶಸ್ತ್ರ ಚಿಕಿತ್ಸೆಯನ್ನು ನಡೆಸಲಾಗಿತ್ತು. ಮಾಧ್ಯಮಗಳು ನೀಡಿದ ಪ್ರಚಾರದಿಂದಾಗಿ ಸರ್ಕಾರ ಕ್ಷಮೆ ಕೋರಬೇಕಾಯಿತು. ಜಪಾನಿನಲ್ಲಿ ಸ್ತ್ರೀಯರ ಮೇಲೆ ನಡೆಯುತ್ತಿರುವ ಬಲಾತ್ಕಾರ ಶಸ್ತ್ರ ಚಿಕಿತ್ಸೆಗಳನ್ನು ಅಲ್ಲಿಯ ಪತ್ರಿಕೆಗಳು ನಿರ್ಲಕ್ಷಿಸುತ್ತಿವೆ. ಸರ್ಕಾರಿ ದಾಖಲೆಗಳನ್ನು ಪರಿಶೀಲಿಸಿದಾಗ ಇದುವರೆಗೂ 16,500 ಜನ ಮಹಿಳೆಯರನ್ನು ಅವರ ಒಪ್ಪಿಗೆ ಪಡೆಯದೇ ಶಸ್ತ್ರ ಚಿಕಿತ್ಸೆಗೆ ಗುರಿಪಡಿಸಲಾಗಿದೆ. ಅಂಗವಿಕಲತೆ, ಅನುವಂಶೀಯ ರೋಗಗಳು ಮುಂತಾದವುಗಳನ್ನು ತಡೆಯಲು ನೆರವಾಗುವಂತೆ ಕಾನೂನನ್ನು ಜಾರಿಗೆ ತಂದಿರುವುದರ ಪ್ರಯುಕ್ತ ಮಹಿಳೆಯರು ಸೂಕ್ತವಾದ ಪರಿಹಾರದಿಂದಲೂ ವಂಚಿತರಾಗುತ್ತಾರೆ.

ಎಲ್ಲಾ ರಾಷ್ಟ್ರಗಳಲ್ಲೂ ಜನಸಂಖ್ಯೆಯ ಪಾಲಿಸಿಗಳಿಗೆ ಮಹಿಳೆಯರೇ ಮೂಕ ಬಲಿಪಶುಗಳು!



ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 75 ರೂ.**

*ಸಂ. ಮಂಡಳಿ*

REGD NO. KRNA 271

H. S. pushpa
No. 95. Y.V Annaiah Rd
Yelachanahalli
J.P. Nagar post
Bangalore 78

BOOK-POST
PRINTED MATTER




ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067